# ಅಧ್ಯಾತ್ಮಪ್ರಕಾಶ

ಸಂಸ್ಥಾಪಕರು : ಪ. ಪ. ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು

'एतज्ज्ञेयं नित्यमेवाऽऽत्मसंस्थं नातःपरं वेदितव्यं हि किञ्चित'

ಸಂಪುಟ ೫೩ ಆಗಸ್ಟ್ ೧೯೮೪ ಸಂಚಿಕೆ ೧೨



## ವಿಷಯಗಳು



ಪತ್ರಿಕೆಯ ಚಂದಾ
ವರ್ಷಕ್ಕೆ
ರೂ. ೧೫-೦೦
ಪೋಷಕರಿಗೆ ರೂ. ೨೦-೦೦
ಮಹಾಪೋಷಕರಿಗೆ ರೂ. ೧೫೧-೦೦




ಹೊಸ ವರ್ಷಕ್ಕೆ
ಚಂದಾ ಹಣವನ್ನು
ಕಳುಹಿಸಿಕೊಡಿರಿ.

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ :
ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,
ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211

August 1984

॥ ಓಮ್ ॥

# ಶ್ರೀ ಶ್ರೀ ಆರಾಧನಾಮಹೋತ್ಸವ

## ( 1984 )

ಹೊಳೆನರಸೀಪುರದ ಅಧ್ಯಾತ್ಮಪ್ರಕಾಶಕಾರ್ಯಾಲಯದಲ್ಲಿ ಬ್ರಹ್ಮೀಭೂತ ಪರಮಹಂಸ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರ ಆರಾಧನೋತ್ಸವವು ತಾ॥ 26-7-84 ನೇ ಗುರುವಾರದಂದು ವಿಜೃಂಭಣೆಯಿಂದ ನೆರವೇರಿತು. ಈ ಮಹೋತ್ಸವಕ್ಕಾಗಿ ವಿಶೇಷವಾದ ವ್ಯವಸ್ಥೆಗಳನ್ನೂ ಸಿದ್ಧತೆಗಳನ್ನೂ ಮಾಡಲಾಗಿತ್ತು. ಆ ದಿನ ಬೆಳಗ್ಗೆ 7 ಘಂಟೆಯಿಂದ ಶ್ರೀ ದಿಗ್ವಿಜಯರಾಮದೇವರ ಹಾಗೂ ಮಹಾಸಮಾಧಿಯ ದಿವ್ಯಸನ್ನಿಧಿಯಲ್ಲಿ ವಿಶೇಷಪೂಜೆ– ಪಾರಾಯಣಗಳೂ ಅಲಂಕಾರಗಳೂ ನೆರವೇರಿದವು. ಬೆಳಗ್ಗೆ 10-30 ರಿಂದ ಶ್ರೀರಾಮತಾರಕಮಹಾಮಂತ್ರಹವನವೂ ಪೂರ್ಣಾಹುತಿಯೂ ನಡೆಯಿತು. ಆ ಸಮಯಕ್ಕೆ ಮಾನ್ಯ ಲೋಕೋಪಯೋಗಿ ಸಚಿವ ಶ್ರೀ॥ ಹೆಚ್.ಡಿ. ದೇವೇಗೌಡರು ದಯಮಾಡಿಸಿದ್ದರು. ವೈದಿಕಾರಾಧನೆಯ ಅನಂತರ ಮಹಾಮಂಗಲಾರತಿಯನ್ನು ನೆರವೇರಿಸಿ ಸನ್ಮಾನ್ಯ ಸಚಿವರ ಗೌರವಾರ್ಥವಾಗಿ ಮಹಾಸಭೆಯನ್ನೇರ್ಪಡಿಸಿ ಕಾರ್ಯಾಲಯದ ಪರವಾಗಿ 'ಮನವಿ ಪತ್ರ'ವನ್ನು ಅರ್ಪಿಸಲಾಯಿತು. ಸಚಿವರು ತೀರ್ಥಪ್ರಸಾದಗಳನ್ನು ಸ್ವೀಕರಿಸಿ ದಯಮಾಡಿಸಿದರು. ಭಕ್ತವೃಂದದವರೆಲ್ಲರಿಗೂ ಭೋಜನವು ನಡೆಯಿತು.

ಸಂಜೆ 7 ಘಂಟೆಯಿಂದ ವಿದ್ವತ್ಸಭೆಯು ನಡೆಯಿತು. ಬೆಂಗಳೂರಿನಿಂದ ದಯಮಾಡಿಸಿದ್ದ ಮುಖ್ಯ ಅತಿಥಿಗಳಾದ ಶ್ರೀ॥ ಪ್ರೊ. ಕೆ.ಟಿ. ಪಾಂಡುರಂಗಿಯವರು ಕಾರ್ಯಾಲಯದ ಪಂಡಿತ ಅಧ್ಯಾತ್ಮವಿದ್ಯಾಪ್ರವೀಣ ಶ್ರೀ॥ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳು ಅನುವಾದಿಸಿ ಪ್ರಕಟಿಸಿದ್ದ "ಅಧ್ಯಾತ್ಮರಾಮಾಯಣ" (೬೦೦ ಪುಟಗಳು) ಗ್ರಂಥವನ್ನು ಬಿಡುಗಡೆಮಾಡಿ ಅಮೋಘವಾದ ಉಪನ್ಯಾಸವನ್ನು ಮಾಡಿದರು. ಶ್ರೀಯುತರು ತಮ್ಮ ಭಾಷಣದಲ್ಲಿ ರಾಮಾಯಣಗಳ ವೈಶಿಷ್ಟ್ಯ, ಭಾಷೆಯ ಲಾಲಿತ್ಯ, ಅನುವಾದಕರ ಸರಳ ಹಾಗೂ ನಿಖರವಾದ ಬರವಣಿಗೆ– ಮುಂತಾದವುಗಳನ್ನು ಪ್ರಸ್ತಾಪಿಸಿ ಅಧ್ಯಾತ್ಮಪ್ರಕಾಶಕಾರ್ಯಾಲಯವು ಮಾಡಿರುವ ಹಾಗೂ ಮಾಡುತ್ತಿರುವ ಸಾರಸ್ವತಸೇವೆಯನ್ನು ಕೊಂಡಾಡಿದರು. ಸಂಸ್ಥಾಪಕರ ತಪಶ್ಶಕ್ತಿಯೂ ಸಾಧನೆಯೂ ಹೆಚ್ಚಿನ ಜನರನ್ನು ಅಧ್ಯಾತ್ಮದಕಡೆಗೆ ಅಭಿಮುಖರಾಗುವಂತೆ ಮಾಡಿರುವದು ಒಂದು ದೊಡ್ಡ ಪವಾಡವೆಂದು ವರ್ಣಿಸಿದರು. ಅನಂತರ ಹಾಸನದ ವಿಶೇಷ ಜಿಲ್ಲಾಧಿಕಾರಿಗಳಾದ ಶ್ರೀ ಪಿ. ವಾಸುದೇವರವರು ಶ್ರೀಶ್ರೀಗಳವರ "ಶ್ರೀಶಂಕರಭಗವತ್ಪಾದರ ಸರ್ವಸಮ್ಮತೋಪದೇಶಗಳು" ಎಂಬ ಗ್ರಂಥವನ್ನು ಉದ್ಘಾಟಿಸಿ ವಿಚಾರಪೂರಿತವಾದ ಭಾಷಣವನ್ನು ಮಾಡಿದರು. ಕಾರ್ಯಾಲಯದ ಟ್ರಸ್ಟ್ ಕಮಿಟಿ ಅಧ್ಯಕ್ಷರಾದ ಶ್ರೀ॥ ಎಂ. ಜೆ. ಕೋದಂಡರಾಮಶೆಟ್ಟರು, ಕಾಫಿಪ್ಲಾಂಟರ್– ಇವರು ಸಭಾಧ್ಯಕ್ಷತೆಯನ್ನು ವಹಿಸಿದ್ದರು. ಕಾರ್ಯಕಾರಿಸಮಿತಿಯ ಅಧ್ಯಕ್ಷರಾದ ಶ್ರೀ॥ ಎ. ತಾಂಡವೇಶ್ವರರು ಸಂಸ್ಥೆಯ ವರದಿಯನ್ನು ಒಪ್ಪಿಸಿ ಹಣಕಾಸುಪರಿಸ್ಥಿತಿಯನ್ನು ಸಭೆಯ ಮುಂದಿಟ್ಟರು. ಚಿಕ್ಕಮಗಳೂರಿನಿಂದ ಬಂದಿದ್ದ ಶ್ರೀ॥ ಕಾಶಿ ವಿಶ್ವನಾಥಶೆಟ್ಟರೂ ಭಾಷಣಮಾಡಿದರು. ಸಂಸ್ಥೆಯ ನೌಕರರುಗಳಿಗೆ ಯಥೋಚಿತ ಬಹುಮಾನವನ್ನೂ ನೀಡಲಾಯಿತು. ಕಡೆಯಲ್ಲಿ ಶ್ರೀ॥ ಹೆಚ್. ಸತ್ಯನಾರಾಯಣರಾವ್‌ರವರು ವಂದನಾರ್ಪಣೆ ಮಾಡಿದರು. ಮಹಾಮಂಗಲಾರತಿಯೊಂದಿಗೆ ಸಭೆಯು ಸಮಾಪ್ತವಾಯಿತು.

---

॥ ಓಮ್ ॥

# ಅಧ್ಯಾತ್ಮಪ್ರಕಾಶ

ಸಂಪುಟ ೫೩]  ವರ್ಷಕ್ಕೆ ರೂ. ೧೫-೦೦ ; ಬಿಡಿ ಸಂಚಿಕೆಗೆ : ರೂ. ೧.೨೫  [ಸಂಚಿಕೆ ೧೨

ಆಗಸ್ಟ್-1984

( ಶ್ರೀ ರಕ್ತಾಕ್ಷಿಸಂವತ್ಸರದ ಶ್ರಾವಣ )

## ವೈಶ್ವಾನರಾಗ್ನಿಹೋತ್ರದ ಮಹಿಮೆ

**ಓಂ ॥ ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಗ್ಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯನ್ತೇ ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ ॥**

—ಛಾಂದೋಗ್ಯೋಪನಿಷತ್ತು ೫-೨೪-೩.

**ಭಾವಾರ್ಥ :-** ಅಲ್ಲಿ ಯಾವನು ಇದನ್ನು ಹೀಗೆಂದರಿತುಕೊಂಡು ಅಗ್ನಿಹೋತ್ರವನ್ನು ಹೋಮಮಾಡುವನೋ (ಅವನಿಗೆ) ಹೇಗೆ ನೊದೆಯ ಹುಲ್ಲಿನ ಹತ್ತಿಯನ್ನು ಬೆಂಕಿಯಲ್ಲಿ ಹಾಕಿದರೆ ಸುಡುವದೋ ಹಾಗೆಯೇ ಇವನ ಎಲ್ಲಾ ಪಾಪಗಳೂ ಸುಡುತ್ತವೆ.

[ ವೈಶ್ವಾನರೋಪಾಸಕನು ಮಾಡುವ ಊಟವೇ ಅಗ್ನಿಹೋತ್ರವು. ಏಕೆಂದರೆ ಅವನು ವೈಶ್ವಾನರಭಾವದಿಂದ ಸರ್ವಾತ್ಮನಾಗಿರುವನು. ಶ್ರೀಕೃಷ್ಣನು ಒಂದು ಅಗುಳನ್ನು ಸೇವಿಸಿದಾಗ ದೂರ್ವಾಸರ ಶಿಷ್ಯವೃಂದವೆಲ್ಲ ತೃಪ್ತಿಪಟ್ಟಂತೆ- ಈ ಉಪಾಸಕನ ಭೋಜನವೂ ಸರ್ವಪ್ರಾಣಿಗಳಿಗೂ ತೃಪ್ತಿಯನ್ನು ನೀಡುವದು. ಮತ್ತು ಉಪಾಸನಾಬಲದಿಂದ ಸಮಸ್ತ ಪಾಪಗಳೂ- ಬೆಂಕಿಯಲ್ಲಿ ಬಿದ್ದ ಅರಳೆಯಂತೆ ಸುಟ್ಟು ಬೂದಿಯಾಗುವವು-ಎಂದಭಿಪ್ರಾಯ. ]

# ಅಧ್ಯಾತ್ಮಸಂದೇಶ

(ಗುರುಕಿಂಕರ)

ಹಿಂದಿನ ಲೇಖನದಲ್ಲಿ ವೈಶ್ವಾನರವಿದ್ಯೆಯನ್ನು ಕುರಿತು ತಿಳಿಸಿರುವ ವಿಷಯುಗಳನ್ನು ವಾಚಕರು ಮತ್ತೆ ಮನನಮಾಡಬೇಕು. ಅನಂತರ ಈಗ ಹೇಳಲಿರುವ ಆ ವಿದ್ಯೆಯ ಫಲಶ್ರುತಿಯು ಅರ್ಥವಾಗಲಿದೆ. ವೈಶ್ವಾನರಾತ್ಮನ ವ್ಯಾಪ್ತಿಯನ್ನೂ ಸ್ವರೂಪವನ್ನೂ ಮನಗಂಡಾಗ ಆ ಆತ್ಮನ ಉಪಾಸಕನು ಅದರಲ್ಲಿ ತಾದಾತ್ಮ್ಯವನ್ನು ಪಡೆಯದೆ ಇರಲು ಸಾಧ್ಯವಿಲ್ಲ. ಹೀಗೆ ವೈಶ್ವಾನರಾತ್ಮನೇ ತಾನೆಂಬ ಅಭಿಮಾನವು ಉಂಟಾದಾಗ ಅಂಥ ಉಪಾಸಕನ ಭೋಜನವು ಅಗ್ನಿಹೋತ್ರವೇ ಆಗಿರುತ್ತದೆ- ಎಂದು ಈಗ ತಿಳಿಸುತ್ತಾರೆ. ಅಷ್ಟೇ ಅಲ್ಲ. ಉಪಾಸನೆಯನ್ನು ಚೆನ್ನಾಗಿ ಅಳವಡಿಸಿಕೊಂಡವನು ಹಿಂದಿನಂತೆಯೇ ತನ್ನ ನಿತ್ಯಕರ್ಮವಾದ ಅಗ್ನಿಹೋತ್ರವನ್ನು ಮಾಡಿದರೆ ಅದು ಎಲ್ಲಾ ಲೋಕಗಳಲ್ಲಿಯೂ ಎಲ್ಲಾ ಆತ್ಮರುಗಳಲ್ಲಿಯೂ ಹೋಮಮಾಡಿದಂತಾಗುವದು. ಈ ಉಪಾಸಕನ ಅಗ್ನಿಹೋತ್ರಕ್ಕೆ ಹೋಲಿಸಿದರೆ ಕೇವಲ ಅಗ್ನಿಹೋತ್ರವನ್ನು ಮಾಡುವವನು ಬೂದಿಯಲ್ಲಿ ಹೋಮ ಮಾಡಿದಂತೆಯೇ ಸರಿ-ಎಂದೂ ನಿಂದಿಸಿದೆ. ಆದರೆ ಈ ನಿಂದೆಯನ್ನು 'ನ ಹಿ ನಿಂದಾ' ನ್ಯಾಯದಂತೆ ಉಪಾಸನಾವಿಶಿಷ್ಟವಾದ ಅಗ್ನಿಹೋತ್ರವನ್ನು ಹೊಗಳುವದಕ್ಕಾಗಿಯೇ ಬಂದಿದೆ-ಎಂದು ಕಲ್ಪಿಸಬೇಕು. ಇದು ಹಾಗಿರಲಿ. ಈಗ ಅಗ್ನಿಹೋತ್ರಕ್ಕೂ ಉಪಾಸಕನ ಭೋಜನಕ್ಕೂ ಸಂಬಂಧವೇನೆಂಬುದನ್ನು ತಿಳಿಯೋಣ.

ವೈದಿಕಸಂಸ್ಕೃತಿಯ ಉಪದೇಶದಂತೆ ಯಾವದೇ ಜೀವರಿಗೆ ತೃಪ್ತಿಯನ್ನುಂಟುಮಾಡಬೇಕಾದರೆ ಅನ್ನದಿಂದ ಮಾತ್ರ ಸಾಧ್ಯ-ಎಂದು ಗೊತ್ತಾಗುತ್ತದೆ. ಏಕೆಂದರೆ ಏನನ್ನೇ ಎಷ್ಟೇ ಕೊಟ್ಟರೂ 'ಇನ್ನೂ ಬೇಕು' ಎಂದು ಮನುಷ್ಯನು ಹೇಳುತ್ತಲೇ ಇರುವನು. ಆದರೆ ಊಟವನ್ನು ಬಡಿಸಿದಾಗ ಮಾತ್ರ ಹೊಟ್ಟೆ ತುಂಬಿದ ಕೂಡಲೆ ಸಾಕು-ಎನ್ನುವನು. ಇದೊಂದೇ ತೃಪ್ತಿಸಾಧನವು. ಆದ್ದರಿಂದಲೇ ಅನ್ನದಾನವು ಉಳಿದ ಎಲ್ಲಾ ದಾನಗಳನ್ನೂ ಮೀರಿ ನಿಂತಿರುವದು. ಮನುಷ್ಯನು ಶರೀರವನ್ನು ಬಿಟ್ಟಮೇಲೂ ಆಸೆಗಳು ಅವನನ್ನು ಬಿಟ್ಟಿರುವದಿಲ್ಲವಾಗಿ ಅವನು ಬೇರೊಂದು ದೇಹವನ್ನಾದರೂ ಆಶ್ರಯಿಸಿ ಆ ಶೆಗಳನ್ನು ಪೂರಣಮಾಡಿಕೊಳ್ಳುವದು ಅನಿವಾರ್ಯವಾಗಿರುತ್ತದೆ. ಆದ್ದರಿಂದಲೇ ಸತ್ತವರಿಗೆಲ್ಲ ಅಗ್ನಿಯಮೂಲಕವೋ ಬ್ರಾಹ್ಮಣರಮೂಲಕವೋ ತೃಪ್ತಿಯನ್ನುಂಟುಮಾಡಲು ಶ್ರಾದ್ಧಾದಿಗಳನ್ನು ಮಾಡುವರು. ಈ ಶ್ರಾದ್ಧಾದಿಗಳ ಅನುಷ್ಠಾನಕ್ರಮವೇನೇ ಇರಲಿ, ಈಗಿನ ಜನರು ಅದನ್ನು ರೂಪಾಂತರಗೊಳಿಸಿಯಾದರೂ ಮಾಡುವ ವಿಚಾರವೇನೇ ಇರಲಿ-ಜೀವನಿಗೆ ಶರೀರತ್ಯಾಗಾನಂತರವೂ ಹಸಿವುಬಾಯಾರಿಕೆಗಳ ಹಾಗೂ ಕಾಮಗಳ ಬಾಧೆಯು ತಪ್ಪಿರುವದಿಲ್ಲವಾದ್ದರಿಂದ ಸಂಸಾರಿಗಳೆಲ್ಲರ ದೃಷ್ಟಿಯಿಂದ ತೃಪ್ತಿಗೊಳಿಸುವ ಒಬ್ಬ ಕರ್ತನು ಬೇಕಾಗುವದು. ಕರ್ತನಿಲ್ಲದೆ ಕರ್ಮವಿಲ್ಲ. ಕರ್ಮವಿಲ್ಲದೆ

ತೃಪ್ತಿಯೆಂಬ ಫಲವಿಲ್ಲ. ಆಯಾ ಜೀವರಾಶಿಗಳು ತಮ್ಮತಮ್ಮ ಕರ್ಮಾನುಗುಣವಾಗಿ ಬೇರೆಬೇರೆಯ ದೇಹಗಳನ್ನು ಧರಿಸಿ ಸಂಸಾರಮಾಡುತ್ತಿರುವದರಿಂದ ಇಂಥ ಸಂಸಾರಿಜೀವರೆಲ್ಲರನ್ನೂ ತೃಪ್ತಿಗೊಳಿಸಬೇಕಾದರೆ ಜೀವರುಗಳ ಸಮಷ್ಟಿಯಾದ ವೈಶ್ವಾನರಾತ್ಮನನ್ನು ತೃಪ್ತಿಗೊಳಿಸಲೇಬೇಕು. ಆ ವೈಶ್ವಾನರಾತ್ಮನ ರಹಸ್ಯವನ್ನು ಬಲ್ಲವನು ಅಗ್ನಿಯಲ್ಲಿಯೂ ತನ್ನ ಜಠರದಲ್ಲಿಯೂ ಹೋಮಮಾಡಿದಾಗ ತಾನೇ ತಾನಾಗಿ ಸಮಸ್ತಜೀವರುಗಳಿಗೂ ತೃಪ್ತಿಯು ಲಭಿಸುವದು. ಇದು ವೈದಿಕರ ವಿಚಾರಸರಣಿಯಾಗಿದೆ. ಸದ್ಯಕ್ಕೆ ಇದಕ್ಕಿಂತ ಉತ್ತಮವಾದ ವಿಚಾರಸರಣಿಯು ಕಂಡುಬಂದಿಲ್ಲ. ಒಬ್ಬನು ಊಟಮಾಡಿಬಿಟ್ಟರೆ ಎಲ್ಲರಿಗೂ ತೃಪ್ತಿಯಾಗಿ ತೇಗು ಬರುವಂಥ ಸ್ಥಿತಿಯನ್ನು ವಿಜ್ಞಾನಶಾಸ್ತ್ರವು ಇನ್ನೂ ಕಂಡುಹಿಡಿದಿಲ್ಲ. ಆದ್ದರಿಂದ ವೈದಿಕಸನಾತನವಿಚಾರಸರಣಿಯಂತೆ ವೈಶ್ವಾನರೋಪಾಸಕನ ಅಗ್ನಿಹೋತ್ರವೂ ಭೋಜನವೂ ಸಮಸ್ತಜೀವರ ತೃಪ್ತಿಯೆಂಬ ಫಲವುಳ್ಳದ್ದಾಗಿದೆ- ಎಂದು ಇಲ್ಲಿ ತಿಳಿಸಿದ್ದಾರೆ. ಇದು ಶ್ರದ್ಧಾಗಮ್ಯವಾಗಿರುವದರಿಂದ ವಿಚಾರಕರು ಶ್ರದ್ಧೆಯಿಂದಲೇ ಹೆಜ್ಜೆಯಿಡಬೇಕು. ಇದರ ವಿವರಗಳನ್ನು ಈಗ ನೋಡೋಣ.

ವೈಶ್ವಾನರೋಪಾಸನೆಯೇನೂ ಸುಲಭವಲ್ಲ. ಆದರೆ ಶ್ರದ್ಧೆಯಿಟ್ಟು ಆ ತತ್ತ್ವವನ್ನು ಶಾಸ್ತ್ರದಲ್ಲಿ ಹೇಳಿರುವಂತೆ ಚಿಂತಿಸಿದರೆ ನಮ್ಮ ನಮ್ಮ ಉಪಾಸನೆಗೆ ತಕ್ಕಂತೆ ಫಲವಾಗಿಯೇ ತೀರುತ್ತದೆ. ಹಿಂದಿನ ಕಾಲಕ್ಕೆ ಧರ್ಮರಾಜನು ಕಾಡಿಗೆ ಹೋಗುವಂಥ ಸಮಯ ಬಂದಾಗ-ಬ್ರಾಹ್ಮಣರಿಗೆ ಅನ್ನದಾನಮಾಡುವ ಯೋಗ್ಯತೆಯೂ ಇಲ್ಲವಾದಾಗ- ಧೌಮ್ಯರ ಆದೇಶದಂತೆ ಸೂರ್ಯನನ್ನು ಪ್ರಾರ್ಥಿಸಿ ಅಕ್ಷಯ ಪಾತ್ರೆಯನ್ನು ಪಡೆದುಕೊಂಡ ಕಥೆಯನ್ನು ವಾಚಕರು ಬಲ್ಲವರಾಗಿದ್ದೀರಿ. ಇಲ್ಲಿಯೂ ಅನ್ನದಾನದ್ದೇ ಸಮಸ್ಯೆಯಾಗಿದ್ದಾಗ ವಿಶ್ವನರರಿಗೂ ಒಬ್ಬನೇ ಬೆಳಕಾದ ಸೂರ್ಯನು ಅದನ್ನು ಪರಿಹರಿಸಿದನು. ಅದೇ ಸೂರ್ಯನೇ ಅಗ್ನಿರೂಪದಿಂದ ಹಾಗೂ ಜಠರಾಗ್ನಿರೂಪದಿಂದಲೂ ಇದ್ದುಕೊಂಡಿರುವನು. ಸರ್ವಪ್ರಾಣಿಗಳ ಆತ್ಮನೂ ಆಗಿರುವನು. ಹೀಗೆ ಸೂರ್ಯಾದಿದೇವತೆಗಳ ಮೂಲಕವಾದರೂ ವೈಶ್ವಾನರಚಿಂತನೆಯು ನಮಗೆ ದಕ್ಕುವದಕ್ಕೆ ಅವಕಾಶವಿದೆ. ಅನಂತರ ಕ್ರಮ ಕ್ರಮವಾಗಿ ದೇವತಾದ್ವಾರದಿಂದ ಪೂರ್ಣವೈಶ್ವಾನರನನ್ನು ಮುಟ್ಟಲು ಸಾಧ್ಯವಿದೆ. ಯಾವನಾದರೊಬ್ಬ ಉಪಾಸಕನು ಈ ಸ್ಥಿತಿಯನ್ನು ಜೀವಂತನಾಗಿರುವಾಗಲೇ ಪಡೆದುಕೊಂಡಲ್ಲಿ ಅಂಥವನ ಅಗ್ನಿಹೋತ್ರವು ಅಸಾಧಾರಣವಾದದ್ದಾಗುವದು. ಆವನು ತನ್ನ ಉಪಾಸನಾಬಲದಿಂದ ಈ ಬಹಿರಂಗವಾದ ಕರ್ಮರೂಪವಾದ ಅಗ್ನಿಹೋತ್ರವನ್ನು ಅಧ್ಯಾತ್ಮವಾಗಿ ಉಪಸಂಹಾರಮಾಡಿಕೊಂಡುಬಿಡಬಹುದು. ಆಗ ಅವನ ಭೋಜನವೇ ಅಗ್ನಿಹೋತ್ರವಾಗಿಬಿಡುವದು. ಅವನು ಸ್ವೀಕರಿಸುವ ಆಹಾರದ ತುತ್ತುಗಳೇ ಹವಿಸ್ಸಾಗಿ ಪ್ರಾಣಾದಿದೇವತೆಗಳನ್ನು ಸಂತೋಷಗೊಳಿಸಿಬಿಡುವವು. ಪ್ರಾಣವು ತೃಪ್ತವಾದರೆ ಉಳಿದ ಇಂದ್ರಿಯಗಳೂ ತೃಪ್ತವಾಗುವವು. ಹೀಗೆ ಉಪಾಸಕನ ಪ್ರಾಣಾಗ್ನಿಹೋತ್ರವು ವೈಶ್ವಾನರರೂಪಿಯಾದ ಪರಮಾತ್ಮನ ಆರಾಧನೆಯಾಗಿಬಿಡುವದು.

ಇಂಥ ಉಪಾಸಕನೊಬ್ಬನು ಜಗತ್ತಿನಲ್ಲಿದ್ದಾನೆ- ಎಂದು ಭಾವಿಸುವದಾದರೆ ಶ್ರುತಿಯು ತಿಳಿಸುವಂತೆ ಆತನು ಊಟಮಾಡುವದನ್ನೇ ಎಲ್ಲಾ ಪ್ರಾಣಿಗಳೂ ಕಾದಿರುವವು. ಇದನ್ನು ಒಂದು ಉದಾಹರಣೆಯಿಂದ ಶ್ರುತಿಯು ಹೀಗೆ ವಿವರಿಸುತ್ತಿದೆ: 'ಹೇಗೆ ಹಸಿದ ಬಾಲಕರು ಕೈತುತ್ತಿನ ಊಟಕ್ಕಾಗಿ ತಾಯಿಯನ್ನು ಬಳಿಸಾರಿ ಸುತ್ತಲೂ ಕುಳಿತು ತುತ್ತನ್ನು ತಾಯಿಯ ಕೈಯಿಂದ ನಿರೀಕ್ಷಿಸುವರೋ ಹಾಗೆ ಎಲ್ಲಾ ಭೂತಗಳೂ ಈ ಪ್ರಾಣಾಗ್ನಿಹೋತ್ರಿಯನ್ನು ಬಳಿಸಾರಿ ಅವನ ಊಟಕ್ಕಾಗಿ ಕಾಯುತ್ತಿರುವರು' ಎಂದು ತಿಳಿಸುತ್ತದೆ. ಆದ್ದರಿಂದ ವೈಶ್ವಾನರೋಪಾಸಕನು ಮಾಡುವ ಭೋಜನವನ್ನು ಕುರಿತು ಈಗ ನಾವು ವಿಚಾರಮಾಡಿದಲ್ಲಿ ಹೆಚ್ಚಿನ ಪ್ರಯೋಜನವಾಗಲಿದೆ.

ಭೋಜನವೆಂಬುದು ಲೌಕಿಕಕರ್ಮವು. ಹಸಿದವರೆಲ್ಲ ತಿಂದೇ ತೃಪ್ತಿಯನ್ನು ಹೊಂದಬೇಕಾಗಿದೆ. ಹೀಗಿರುವಲ್ಲಿ ವೈಶ್ವಾನರೋಪಾಸಕನ ಭೋಜನದಲ್ಲೇನು ವಿಶೇಷ ? ಎಂದು ಕೇಳಬಹುದು. ಅದಕ್ಕೆ ಉತ್ತರವು ಹೀಗಿದೆ. ಭೋಜನವು ಲೌಕಿಕಕರ್ಮವೇ ಆದರೂ ಒಂದುಕ್ರಮದಿಂದ ಶಾಸ್ತ್ರೀಯವಾಗಿ ಮಾಡಿದರೆ ಹೊಟ್ಟೆ ತುಂಬುವ ಪ್ರತ್ಯಕ್ಷಫಲದಜೊತೆಗೆ ಅದೃಷ್ಟಫಲವೂ ಆಗುತ್ತದೆ. ವೈದಿಕ ಶಿಷ್ಟಾಚಾರದಂತೆ ಭೋಜನಕ್ರಮವು ಹೀಗಿದೆ: ಒಬ್ಬ ಆಚಾರನಿಷ್ಠನಾದ ವ್ಯಕ್ತಿಯು-ಅವನು ಗೃಹಸ್ಥನಾಗಿದ್ದರೆ-ದಿನಕ್ಕೆ ಎರಡುಬಾರಿ ಮಾತ್ರವೇ ಭೋಜನ ಮಾಡಬೇಕು. ಎಂದರೆ ಬಾಯನ್ನು ಎರಡುಬಾರಿ ಮಾತ್ರ ಉಪಯೋಗಿಸಬೇಕು. ನಡುವೆ ಏನನ್ನೂ ತಿನ್ನಬಾರದು. ವಿಶೇಷನಿಯಮಗಳಿದ್ದಾಗ ಒಂದುಬಾರಿ ಭೋಜನ – ಅಥವಾ ಪೂರ್ತಿ ಉಪವಾಸವೂ ಸಂಭವಿಸಬಹುದು. ಅನಂತರ ಭೋಜನನಿಯಮವು ಹೀಗಿದೆ. ಬೆಳಗ್ಗೆ ಸೂರ್ಯೋದಯಕಾಲದಿಂದ ಏನನ್ನೂ ತಿನ್ನದೆ ಇದ್ದು ನಿತ್ಯಕರ್ಮಗಳೆಲ್ಲವೂ ಪೂರೈಸಿದ ಮೇಲೆ ಭೋಜನಸಮಯಕ್ಕೆ ಪರಿಷೇಚನಮಾಡಿ ಕ್ರಮವಾಗಿ (೧) ಪ್ರಾಣಾಯ ಸ್ವಾಹಾ (೨) ವ್ಯಾನಾಯ ಸ್ವಾಹಾ (೩) ಅಪಾನಾಯ ಸ್ವಾಹಾ (೪) ಸಮಾನಾಯ ಸ್ವಾಹಾ (೫) ಉದಾನಾಯ ಸ್ವಾಹಾ-ಎಂದು ಐದುಬಾರಿ ಅನ್ನವನ್ನು ಜಠರಾಗ್ನಿಯಲ್ಲಿ ಹೋಮಮಾಡಬೇಕು. ಈ ಆಹುತಿಗಳು ನೇರಾಗಿ ಹೊಟ್ಟೆಯೊಳಗಿನ ಅಗ್ನಿದೇವನಿಗೆ ಮುಟ್ಟಬೇಕು. ಅಗಿಯಬಾರದು. ಇದೇ ಪ್ರಾಣಾಗ್ನಿಹೋತ್ರವು. ಅನಂತರ ಮೌನವಾಗಿ ಭೋಜನಮಾಡಬೇಕು-ಇತ್ಯಾದಿ. ಭೋಜನಾನಂತರ ನೀರನ್ನು ಕುಡಿಯುವದು ಬಿಟ್ಟರೆ ಮತ್ತೇನನ್ನೂ ತಿನ್ನಬಾರದು. ಹೀಗೆ ಪ್ರಾಣಾಹುತಿಗಳನ್ನು ಅರ್ಪಿಸುವಾಗ ಇಂಥ ಮಹನೀಯನು ವೈಶ್ವಾನರೋಪಾಸಕನಾಗಿದ್ದಲ್ಲಿ ಹಿಂದೆ ಹೇಳಿದಂತೆ ಎಲ್ಲಾ ಪ್ರಾಣಿಗಳೂ ತೃಪ್ತವಾಗುವವು-ಎಂದು ಉಪನಿಷತ್ತಿನಲ್ಲಿ ತಿಳಿಸಿದೆ. ಒಟ್ಟಿನಲ್ಲಿ ಈ ಉಪಾಸಕನ ಭೋಜನವು ಅಗ್ನಿಹೋತ್ರವೆಂಬ ವೈದಿಕಕರ್ಮವೇ ಆಗಿಬಿಟ್ಟು ಅಪೂರ್ವವಾದ ಫಲವನ್ನು ಕೊಡುವದೇ ಹೊರತು ಜನಸಾಮಾನ್ಯರ ಭೋಜನದಂತೆ ಅಲ್ಲ- ಎಂದಭಿಪ್ರಾಯ.

ಈಗ ನಾವು ವೈಶ್ವಾನರೋಪಾಸಕನ ಭೋಜನವನ್ನೂ ಅದರ ಫಲವನ್ನೂ ಆದರ್ಶವಾಗಿಟ್ಟುಕೊಳ್ಳುವ ಮೂಲಕ ನಮ್ಮ ನಡೆವಳಿಕೆಗಳನ್ನು ತಿದ್ದಿಕೊಳ್ಳಬಹುದಾಗಿದೆ. ಈಗಿನ ಕಾಲಕ್ಕೆ ಟೇಬಲ್‌ಊಟ, ತಟ್ಟೆಯಲ್ಲಿ ಭೋಜನಾದಿಗಳು ಸಹ ನಾಗರಿಕತೆಯ ಕುರುಹೆಂದು ಭಾವಿಸಲ್ಪಟ್ಟಿರುವದರಿಂದ ಎಂಜಲು, ಮುಸುರೆ, ಉಚ್ಛಿಷ್ಟ- ಮುಂತಾದ ಕಲ್ಪನೆಗಳೆಲ್ಲ ಅಳಿಸಿಹೋಗಿ ಪ್ರಾಣಾಗ್ನಿಹೋತ್ರವಾಗಲಿ, ವೈಶ್ವಾನರನ ಆರಾಧನೆಯಾಗಲಿ ಸಾಧ್ಯವಾಗದಂತಾಗಿದೆ. ವಿದೇಶೀಯರಿಗೆ ತಕ್ಕ ಭೋಜನಕ್ರಮಗಳನ್ನು ಅನವಶ್ಯವಾಗಿ ಭಾರತೀಯರು ಅಳವಡಿಸಿಕೊಂಡು ಆಚಾರವಿಚಾರಗಳಿಂದ ಹೀನರಾಗಿ "ನ ಶೌಚಂ ನಾಪಿ ಚಾಚಾರಃ" ಎಂಬ ಭಗವದ್ವಚನದಂತೆ ಆಸುರೀಸಂಪತ್ತಿಗೆ ಉದಾಹರಣೆಯಾಗಿ ಬಾಳುವ ದುಃಸ್ಥಿತಿಯನ್ನು ಹೊಂದಿರುವದು ತೀರ ಶೋಚನೀಯವಾಗಿದೆ. ಇನ್ನು ಮುಂದಿನ ಪೀಳಿಗೆಯವರಿಗೆ ಪರಿಷೇಚನ, ಪ್ರಾಣಾಹುತಿಸ್ವೀಕಾರಗಳೆಂದರೇನು ? ಎಂಬುದೂ ತಿಳಿಯದೆಹೋಗಬಹುದು. ಹೀಗಿದೆ ; ಕಲಿಮಹಿಮೆ. ಆದರೇನು ? ನಿಜವಾಗಿಯೂ ನಮಗೆ ಶಿಷ್ಟಾಚಾರಗಳನ್ನು ಕಾಪಾಡಿಕೊಂಡು ಆ ಮೂಲಕ ಅಮೂಲ್ಯವಾದ ಉಪಾಸನಾಕ್ರಮಗಳನ್ನೂ ಬ್ರಹ್ಮವಿದ್ಯೆಯನ್ನೂ ಜೀವನದಲ್ಲಿ ಅಳವಡಿಸಿಕೊಳ್ಳಬೇಕೆಂದು ಇಷ್ಟವಿದ್ದರೆ ಪ್ರಾಮಾಣಿಕವಾಗಿ ಪ್ರಯತ್ನಮಾಡಬೇಕು. ಈಗಿನ ಭೋಜನಕೂಟಗಳ ವಿಚಾರದಲ್ಲಂತೂ ಹೇಳುವದೇ ಬೇಡ-ಅಷ್ಟು ಅನಾಚಾರಗಳು ಮನೆಮಾಡಿಕೊಂಡಿವೆ. ಅವು ಸಾರ್ವಜನಿಕಕೂಟಗಳಾಗಿ ಪರಿವರ್ತನೆಹೊಂದಿದ್ದು ಸನಾತನಾರ್ಯರ ಆದರ್ಶವನ್ನು ನೆನೆಯಿಸಿಕೊಳ್ಳಲೂ ಸಹ ಅವಕಾಶವಿಲ್ಲದಂತಾಗಿದೆ. ಹೇಗೇ ಇರಲಿ- "ಧರ್ಮಸ್ಯ ಪ್ರಭುರಚ್ಯುತಃ"- ಎಂದಂತೆ ಆ ಭಗವಂತನನ್ನು ಸ್ಮರಿಸಿಕೊಳ್ಳುತ್ತಾ ನಡೆಯಬಹುದಾದಷ್ಟು ಧರ್ಮವನ್ನಾದರೂ ನಾವು ಉಳಿಸಿಕೊಳ್ಳಲು ಪ್ರಯತ್ನಿಸಬೇಕಾಗಿದೆ.

ಈಗ ಉಪಾಸನಾಕಾಂಡದ ಉಪಸಂಹಾರದ ಕಡೆಗೆ ನೋಡೋಣ. ಛಾಂದೋಗ್ಯೋಪನಿಷತ್ತಿನ ಐದನೆಯ ಅಧ್ಯಾಯವು ವೈಶ್ವಾನರವಿದ್ಯೆಯೊಡನೆ ಪೂರೈಸಿರುತ್ತದೆ. ಈವರೆಗಿನ ಐದು ಅಧ್ಯಾಯಗಳಲ್ಲಿ ಸಾಮೋಪಾಸನೆಗಳಿಂದಾರಂಭಿಸಿ ಅನೇಕ ವಿಧವಾದ ಬ್ರಹ್ಮೋಪಾಸನೆಗಳು ಪ್ರಸ್ತಾಪಿಸಲ್ಪಟ್ಟವು. ಅವುಗಳನ್ನೆಲ್ಲ ಯಥಾಮತಿಯಾಗಿ ಈವರೆಗಿನ ೪೮ ಸಂದೇಶಗಳಲ್ಲಿ (1981ನೇ ಸೆಪ್ಟೆಂಬರ್‌ನಿಂದ ಈವರೆಗೆ) ವಿವರಿಸಿರುತ್ತೇನೆ. ಉಪಾಸನೆಯೂ ಮಾನಸಿಕಕರ್ಮವೇ ಆಗಿರುತ್ತದೆ. ಇನ್ನುಮುಂದೆ ಈ ಕರ್ಮಕಾಂಡವನ್ನು ಮೀರಿದ ಜ್ಞಾನಕಾಂಡವು ಸ್ವತಂತ್ರವಾಗಿ ಆರಂಭವಾಗಲಿದೆ. ಅದರಲ್ಲಿ ವಸ್ತುತಂತ್ರವಾದ ಬ್ರಹ್ಮವಿದ್ಯೆಯೇ ವಿವರಿಸಲ್ಪಡುವದು. ಬ್ರಹ್ಮವಿದ್ಯೆಯೇ ಅಮೃತತ್ವಕ್ಕೆ ಏಕೈಕಸಾಧನವಾಗಿರುತ್ತದೆ. ಇಂಥ ಬ್ರಹ್ಮವಿದ್ಯೆಯ ವಿಚಾರವಾಗಿ ಮುಂದಿನ ಸಂಪುಟದಲ್ಲಿ ಇದೇ ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದ ಮಂತ್ರಗಳ ವಿವರಣೆಯೊಂದಿಗೆ ಪ್ರಸ್ತಾಪಿಸಲಾಗುವದು.

---

## ಸಾಮಾನ್ಯನೀತಿ

**ಶಾಠ್ಯೇನ ಧರ್ಮಂ ಕಪಟೇನ ಮಿತ್ರಂ**
**ಪರೋಪತಾಪೇನ ಸಮೃದ್ಧಿಭಾವಮ್ ।**
**ಸುಖೇನ ವಿದ್ಯಾಂ ಪರುಷೇಣ ನಾರೀಂ**
**ವಾಂಛತಿ ಯೇ ವ್ಯಕ್ತಮಪಂಡಿತಾಸ್ತೇ ॥೧॥**

೧. ವಂಚನೆಯಿಂದ ಧರ್ಮವನ್ನೂ ಮೋಸದಿಂದ ಸ್ನೇಹಿತನನ್ನೂ ಬೇರೊಬ್ಬರನ್ನು ದುಃಖಗೊಳಿಸುವದರಿಂದ ಸಮೃದ್ಧಿಯ ಅಂತಸ್ತನ್ನೂ ಕಷ್ಟಪಡದೆ ವಿದ್ಯೆಯನ್ನೂ ಒರಟುತನದಿಂದ ಹೆಂಗಸನ್ನೂ ಯಾರು ಬಯಸುವರೋ ಅವರು ಮೂರ್ಖರೇ ಸರಿ.

**ರಾಜಾ ಘೃಣೀ ಬ್ರಾಹ್ಮಣಃ ಸರ್ವಭಕ್ಷೀ**
**ಸ್ತ್ರೀ ಚಾವಶಾ ದುಷ್ಟಬುದ್ಧಿಃ ಸಹಾಯಃ ।**
**ಪ್ರೇಷ್ಯಃ ಪ್ರತೀಪೋಽಧಿಕೃತಃ ಪ್ರಮಾದೀ**
**ತ್ಯಾಜ್ಯಾ ಇಮೇ ಯಶ್ಚ ಕೃತಂ ನ ವೇತ್ತಿ ॥೨॥**

೨. ಜಿಪುಣನಾದ ರಾಜನು, ಎಲ್ಲವನ್ನೂ ತಿನ್ನುವ ಬ್ರಾಹ್ಮಣ, ಹತೋಟಿಯಲ್ಲಿಲ್ಲದ ಹೆಂಗಸು, ಕೆಟ್ಟಬುದ್ಧಿಯುಳ್ಳ ಸಹಾಯಕ, ಕಾರ್ಯಸಾಧನೆಗಾಗಿ ಕಳುಹಿಸಿದ ವಿಪರೀತ ನಡತೆಯವನು, ತಪ್ಪುಮಾಡುವ ಅಧಿಕಾರಿ, ಕೃತಜ್ಞತೆಯಿಲ್ಲದವನು-ಇವರೆಲ್ಲರೂ ತ್ಯಾಜ್ಯರು.

**ಅರ್ಥಾಗಮೋ ನಿತ್ಯಮರೋಗಿತಾ ಚ**
**ಪ್ರಿಯಾ ಚ ಭಾರ್ಯಾ ಪ್ರಿಯವಾದಿನೀ ಚ ।**
**ವಶ್ಯಶ್ಚ ಪುತ್ರೋಽರ್ಥಕರೀ ಚ ವಿದ್ಯಾ**
**ಷಡ್ ಜೀವಲೋಕಸ್ಯ ಸುಖಾನಿ ರಾಜನ್ ॥೩॥**

೩. ಪ್ರತಿದಿನವೂ ಧನಸಂಗ್ರಹವಾಗುತ್ತಿರುವದು, ಆರೋಗ್ಯವಾಗಿರುವಿಕೆ, ಪ್ರೀತಿಪಾತ್ರಳಾದ ಹಾಗೂ ಒಳ್ಳೆಯ ಮಾತನ್ನಾಡುವ ಹೆಂಡತಿ, ತನ್ನ ಸ್ವಾಧೀನದಲ್ಲಿರುವ ಮಗ, ಹಣವನ್ನು ತರುವಂಥ ವಿದ್ಯೆ- ಇವು ಆರು ಎಲೈ ರಾಜನೆ, ಈ ಪ್ರಪಂಚದಲ್ಲಿ ಸುಖಸಾಧನಗಳೆನಿಸುವವು.

**ಆರೋಗ್ಯಮಾನೃಣ್ಯಮವಿಪ್ರವಾಸಃ**
**ಸಪ್ರತ್ಯಯಾ ವೃತ್ತಿರಭೀತಿವಾಸಃ ।**
**ಸದ್ಭಿಃ ಮನುಷ್ಯೈಃ ಸಹ ಸಂಪ್ರಯೋಗಃ**
**ಷಡ್ ಜೀವಲೋಕಸ್ಯ ಸುಖಾನಿ ರಾಜನ್ ॥೪॥**

೪. ಆರೋಗ್ಯ, ಸಾಲವಿಲ್ಲದಿರುವಿಕೆ, ಪ್ರವಾಸವಿಲ್ಲದಿರುವದು, ನಂಬಿಕೆಯುಳ್ಳ ಉದ್ಯೋಗ, ಸಜ್ಜನರ ಸಹವಾಸ, ಭಯವಿಲ್ಲದ ಜೀವನ- ಈ ಆರು ಪ್ರಾಪಂಚಿಕಸುಖಗಳೆನಿಸುವವು.

---

# ಸತ್ಯಕಾಮನ ಪತ್ರಗಳು

## ರಂಗಪ್ರವೇಶ

"ಈಚೆಗೆ ನಾನು ಭರತನಾಟ್ಯರಂಗಪ್ರವೇಶ- ಸಮಾರಂಭವೊಂದಕ್ಕೆ ಹೋಗಿದ್ದೆನು. ಕಾರ್ಯಕ್ರಮವು ಚೆನ್ನಾಗಿತ್ತು. ವಿದ್ಯಾರ್ಥಿನಿಯು ಕಲಿತಿದ್ದ ಪಾಠಗಳನ್ನು ಚೆನ್ನಾಗಿ ಪ್ರದರ್ಶಿಸಿದಳೆಂದು ಎಲ್ಲರೂ ಅಭಿಪ್ರಾಯಪಟ್ಟರು. ನಾಟ್ಯ ವಿದ್ಯೆಯು ಸುಲಭವಲ್ಲವೆಂತ ನನಗೂ ಮನದಟ್ಟಾಯಿತು. ಈ ಕಲೆಯೂ ಸಹ ಶಿಸ್ತು, ಅಭ್ಯಾಸ, ಭಾವನೆ, ಶ್ರಮ- ಮುಂತಾದ ಕಟ್ಟಳೆಗಳಿಲ್ಲದೆ ದೊರಕುವಂತಿಲ್ಲವೆಂಬುದು ಗೊತ್ತಾಯಿತು. ಇದರ ಗುರಿಯೂ ಭಗವಂತನ ಕಡೆಗೇ ಕೇಂದ್ರೀಕೃತವಾಗಿದ್ದುದು ಕಂಡುಬಂತು. ಇಂಥ ಅಮೂಲ್ಯವಿದ್ಯೆಯು ಎಲ್ಲರಿಗೂ ದೊರಕಲಾರದು. ಆಧ್ಯಾತ್ಮ ದೃಷ್ಟಿಯಿಂದ ಈ ಸಂದರ್ಭದಲ್ಲಿ ತಿಳಿದುಕೊಳ್ಳಬೇಕಾದ ಹಾಗೂ ಅನುಸಂಧಾನ ಮಾಡುವಂಥ ವಿಚಾರಗಳೇನಾದರೂ ಇವೆಯೆ? ಇದ್ದರೆ ತಿಳಿಸಬಲ್ಲಿರಾ?"- ಎಂದು ಕೇಳಿ ನೀವು ಬರೆದ ಪತ್ರವು ತಲುಪಿದೆ.

ನಾನೇನೂ ಭರತನಾಟ್ಯವಿದ್ಯಾಭಿಜ್ಞನಲ್ಲ. ಆದರೂ ಅದರ ಸ್ಥೂಲಪರಿ ಚಯವನ್ನು ತಿಳಿದಿದ್ದೇನೆ. ನಾಟ್ಯಶಾಸ್ತ್ರಪ್ರವರ್ತಕನಾದ ಭರತಮುನಿಯು ಒಬ್ಬ ಋಷಿಯೆಂದು ತಿಳಿದಮೇಲೆ, ಆತನು ಕಂಡುಹಿಡಿದು ಪ್ರದರ್ಶಿಸಿದ ಶಾಸ್ತ್ರವು ವೇದಕ್ಕೆ ಸಮಾನವೆಂಬುದನ್ನು ಬೇರೆಯಾಗಿ ಹೇಳಬೇಕಾಗಿಲ್ಲ. ಪ್ರತಿದಿನವೂ ದೇವರ ಪೂಜೆ ಮಾಡುವಾಗ ಕಡೆಯಲ್ಲಿ 'ನಾಟ್ಯಂ ಸಮರ್ಪಯಾಮಿ' ಎಂದು ಹೇಳುವ ವಾಡಿಕೆ ಯಿದೆ. ಇದು ಕೂಡ ನಾವು ದೇವರಿಗೆ ಅರ್ಪಿಸಬೇಕಾದ ಉಪಚಾರಗಳಲ್ಲಿ ಒಂದು- ಎಂದು ಗೊತ್ತಾಗುತ್ತದೆ. ಈ ಅಭಿಪ್ರಾಯದಂತೆ 'ಅರ್ಚಕ' ರೆನಿಸಿರುವವರೆಲ್ಲರೂ 'ನಾಟ್ಯ'ದ ಪರಿಚಯವುಳ್ಳವರಾಗಿರಬೇಕೆಂದು ಸಿದ್ಧವಾಗುತ್ತದೆ. ಆದರೆ ಈಗಿನ ಕಾಲಕ್ಕೆ ಪೂಜೆ ಮಾಡುವವರನೇಕರು ಮಂತ್ರಗಳೇ ಗೊತ್ತಿಲ್ಲದವರಾಗಿದ್ದು ಪುರೋ ಹಿತರ ಸಹಾಯದಿಂದ ಪೂಜೆಗಳನ್ನು ನೆರವೇರಿಸುವದರಿಂದ ಇಂಥ ಸಂದರ್ಭದಲ್ಲಿ ನಾಟ್ಯಕಲೆಯವರೆಗೂ ಅರ್ಚಕರ ಯೋಗ್ಯತೆಯನ್ನು ನಿರೀಕ್ಷಿಸುವಂತಿಲ್ಲ. ಇದು ಹೇಗೇ ಇರಲಿ- ಭಗವಂತನ ಪೂಜೆಯನ್ನು ಪರಿಪೂರ್ಣಗೊಳಿಸುವ ದೃಷ್ಟಿಯಿಂದ ನಾಟ್ಯವು ಬೇಕು. ಆದ್ದರಿಂದ ವೇದಮಂತ್ರಗಳು, ಸ್ತೋತ್ರಗಳು- ಎಷ್ಟು ಅಗತ್ಯವೋ ಭಗವ ದಾರಾಧನೆಗೆ ಸಂಗೀತ, ನಾಟ್ಯಾದಿಗಳೂ ಅಷ್ಟೇ ಅವಶ್ಯವೆಂದು ತಿಳಿಯಿರಿ. ನಮ್ಮ ಹೃದಯಾಂತರ್ಗತನಾದ ಪರಮಶಿವನೇ ಪ್ರಪ್ರಥಮ ನಾಟ್ಯಾಚಾರ್ಯನು. ಆತನು ತ್ರಿಲೋಕಜನನಿಯಾದ ದೇವಿಯನ್ನು ಪೀಠದಲ್ಲಿ ಕುಳ್ಳಿರಿಸಿ ಸಂಧ್ಯಾಕಾಲದಲ್ಲಿ ಪ್ರತಿ ದಿನವೂ ಕೈಲಾಸಶೈಲದಲ್ಲಿ ನರ್ತನಮಾಡುವನೆಂದೂ ದೇವತೆಗಳೆಲ್ಲರೂ ಅದರಲ್ಲಿ ಭಾಗವಹಿಸುವರೆಂದೂ ಪುರಾಣಗಳಲ್ಲಿದೆ. ಇದು ಶಿವನ ಜ್ಞಾನನಿಷ್ಠೆಯ ಆನಂದದ ಪ್ರದರ್ಶನವು. ಜ್ಞಾನಿಯು ತನ್ನ ಬ್ರಹ್ಮಾನಂದವನ್ನು ತೋರ್ಪಡಿಸುವ ಸಂದರ್ಭವೇ ಈ ನಾಟ್ಯವೆಂದು ಅಭಿಪ್ರಾಯ.

ಇನ್ನು ರಂಗಪ್ರವೇಶದ ವಿಚಾರ. ಪ್ರತಿಯೊಬ್ಬ ಮಾನವನ **ಅಂತರಂಗ**ವನ್ನೂ ನಟಸಾರ್ವಭೌಮನಾದ ಪರಮೇಶ್ವರನು ಪ್ರವೇಶಿಸಿಯೇ ಬಿಟ್ಟಿರುತ್ತಾನೆ. ಆತನ ನರ್ತನವು ಹೃದಯದಲ್ಲಿ ನಡೆದುಕೊಂಡೇ ಇರುತ್ತದೆ. ಅದನ್ನು ನೋಡಬೇಕಾದರೆ ನಾವು ಒಳಗಣ್ಣನ್ನು ತೆರೆಯಬೇಕು. ಮತ್ತು ತಾಳ-ಮೇಳಗಳಿಗೆ ಹೊಂದಿಕೊಳ್ಳಬೇಕು. ಸಂಸಾರಿಗಳೆಲ್ಲರಿಗೂ ಜೀವನದಲ್ಲಿ ತಾಳಮೇಳಗಳು ತಪ್ಪಿರುತ್ತವೆ. ಅವರು ಇಂದ್ರಿಯವಶರಾಗಿಬಿಟ್ಟಿರುವದರಿಂದ ಸರಿಯಾಗಿ ಹೆಜ್ಜೆಗಳನ್ನಿಡುತ್ತಿಲ್ಲ. ಧರ್ಮ-ಅಧರ್ಮಗಳ ವಿವೇಚನೆಯಿಲ್ಲದೆ ತಾಳ ತಪ್ಪಿ ಕಾಲು ಹಾಕುತ್ತಿರುವದರಿಂದ ಅವರಿಗೆ ನಟರಾಜನ ಅಂತರ್ನರ್ತನದ ಆನಂದವು ದಕ್ಕಿಲ್ಲವಾಗಿದೆ. ಕಾರ್ಯಾಕಾರ್ಯವಿವೇಚನಾಶೂನ್ಯರಿಗೆ ಜೀವನವು ಆನಂದದೊಡನೆ ಮೇಳೈಸದೆಹೋಗಿದ್ದು ಈಶ್ವರಾನುಗ್ರಹದ ಲಾಭವು ಇಲ್ಲದಂತಾಗಿದೆ. ನರ್ತನವನ್ನು ಚೆನ್ನಾಗಿ ಅಭ್ಯಾಸಮಾಡದೆ ರಂಗಪ್ರವೇಶಮಾಡಿದಾಗ ಹೇಗೆ ನಗೆಗೀಡಾಗುವ ಸಂಭವವಿದೆಯೋ ಹಾಗೆ ನಾವುಗಳು ಪರಮೇಶ್ವರನ ಸತ್ಯಸಂಕಲ್ಪವನ್ನೂ ಶಕ್ತಿಯನ್ನೂ ಅರಿಯದೆ ಸ್ವೇಚ್ಛೆಯಾಗಿ ಕುಣಿಯುತ್ತಾಹೋದರೆ ನರ್ತನಾನಂಧದ ಲಾಭವನ್ನು ಕಳೆದುಕೊಳ್ಳುವದರ ಜೊತೆಗೆ ಸಂಸಾರಕ್ಕೇ ಜಾರಿಬಿದ್ದು ಜ್ಞಾನಿಗಳ ನಗೆಗೀಡಾಗುವೆವು. ಆದ್ದರಿಂದ ಜೀವನರಂಗಪ್ರವೇಶಕ್ಕೆ ಪರಿಪೂರಕವಾಗಿ ಶ್ರದ್ಧೆ ಹಾಗೂ ತತ್ಪರತೆಯನ್ನು ಮೈಗೂಡಿಸಿಕೊಂಡಿರಬೇಕು.

ಜೀವರುಗಳೆಲ್ಲರೂ ನಾಟ್ಯರಂಗದ ವಿದ್ಯಾರ್ಥಿಗಳೇ ಆಗಿದ್ದಾರೆ. ವಿಶೇಷವಾಗಿ ಮನುಷ್ಯನಿಗೆ ಈ ಜೀವನನಾಟ್ಯರಂಗಪ್ರವೇಶವು ಅನಿವಾರ್ಯವಾಗಿರುತ್ತದೆ. ಏಕೆಂದರೆ ಹುಟ್ಟಿದ ಮನುಷ್ಯನು ಹೇಗಾದರೂ ಮಾಡಿ ಸಮಾಜದಲ್ಲಿ ಜೀವಿಸಲೇಬೇಕಾಗಿದೆ. ಹಾಗೆಂತ ಕಾಗೆ, ನರಿಗಳಂತೆ ನಡೆದುಕೊಂಡು ಹೇಗೆ ಹೇಗೋ ಬಾಳುವದು ರಂಗಪ್ರವೇಶವಾಗಲಾರದು. ಅದಕ್ಕೆ ಬದಲಾಗಿ ತನ್ನಂತೆಯೇ ಇರುವ ಉಳಿದ ಜೀವರುಗಳನ್ನೂ ಗಣನೆಗೆ ತಂದುಕೊಂಡು ಈಶ್ವರನಿಯಮಾನುಸಾರವಾಗಿ ತನಗೆ ಲಭಿಸಿದ ಸನ್ನಿವೇಶಗಳನ್ನು ಸಾರ್ಥಕಮಾಡಿಕೊಂಡು ವಿದ್ಯೆ, ದಾನ, ಪರೋಪಕಾರ, ಭೂತದಯೆ, ಆರ್ಜವ, ಕ್ಷಮೆ- ಮುಂತಾದ ಪಾಠಗಳನ್ನು ಕಲಿತು ಈಶ್ವರನು ಮೆಚ್ಚುವಂತೆ ಅವುಗಳನ್ನು ಹಿತಮಿತವಾಗಿ ಜೀವನರಂಗದಲ್ಲಿ ಅಭಿನಯಿಸಿ ತಾನೂ ಆನಂದಪಟ್ಟು ಉಳಿದವರನ್ನೂ ಆನಂದಗೊಳಿಸುವ ಕಲೆಯೇ ನಿಜವಾದ ಭರತನಾಟ್ಯವೆನಿಸುವದು. ಭಾ-ಎಂದರೆ ಪ್ರಕಾಶವು. ಅದು ಜ್ಞಾನವನ್ನು ಪ್ರತಿನಿಧಿಸುತ್ತದೆ. ಜ್ಞಾನದ ಕಡೆಗೆ ಒಲವುಳ್ಳವನಾಗಿರುವಿಕೆಯೇ ಭರತನಾಟ್ಯದ ವಿದ್ಯಾರ್ಥಿಯ ಲಕ್ಷಣವಾಗಿದೆ. "ಮುಹೂರ್ತಮಪಿ ಜೀವೇತ ನರಃ ಶುಕ್ಲೇನ ಕರ್ಮಣಾ" ಎಂದು ಹಿರಿಯರು ತಿಳಿಸುವಂತೆ ಮನುಷ್ಯನು ಎಷ್ಟು ಹೆಚ್ಚು ಕಾಲ ಬದುಕಿದ್ದನು ? ಎಂಬಿದು ಗಣನೀಯವಲ್ಲ. ಜೀವನದಲ್ಲಿ ಏನೇನು ಒಳ್ಳೆಯ ಹೆಜ್ಜೆಗಳನ್ನಿಟ್ಟನು ?- ಎಂಬುದೇ ಮುಖ್ಯ. ಇಂಥ ಪಾದವಿನ್ಯಾಸವನ್ನು ನೀವೂ ಅಭ್ಯಾಸಮಾಡಿರಿ.

---

# ಆರಿಸಿದ ಅರಳುಮೊಗ್ಗುಗಳು

(ಪ್ರೊ. ಕೆ. ಎಸ್. ನಾರಾಯಣಾಚಾರ್ಯರ 'ವೇದಸಂಸ್ಕೃತಿಯ ಪರಿಚಯ' ಗ್ರಂಥದಿಂದ)

೧. ಮನುಷ್ಯನು ಬಯಸುವದು ಸುಖವನ್ನೇ ಆದರೂ ಅವನು ಪಡೆಯುವದು ಮಾತ್ರ ವಿಶೇಷವಾಗಿ ದುಃಖವನ್ನೇ. ಇದಕ್ಕೆ ಕಾರಣ- ಅವನು ತಿಳಿದೋ ತಿಳಿಯದೆಯೋ ಜಗತ್ತಿಗೆ ಅಮಂಗಳವನ್ನು ಕೋರುವ, ಬಯಸುವ, ಮತ್ತು ಜೀವನ ವಿರುದ್ಧಸ್ವಭಾವದ ಕಾರ್ಯಗಳನ್ನೇ ಮಾಡುತ್ತಿರುವದು, ಅವನ್ನೇ ಮನಸ್ಸಿನಲ್ಲಿ ಚಿಂತಿಸುವದು. ಇದು ದೈವಸಂಕಲ್ಪದಲ್ಲಿ ಏರ್ಪಟ್ಟದ್ದಲ್ಲ. ದೈವದತ್ತಸ್ವಾತಂತ್ರ್ಯದ ದುರುಪಯೋಗದಿಂದ ಬಂದದ್ದು. ಜಗತ್ತಿನ ಬಗೆಗೆ ದೇವರ ಹೃದಯದಲ್ಲಿರುವ ಭಾವವಾದರೂ ಏನು? ಅವನ ಸಂಕಲ್ಪವಾದರೂ ಏನು?- ಎಂಬ ಪ್ರಶ್ನೆಗಳಿಗೆ ವೇದದ ಒಂದು ಮಂತ್ರವು ಉತ್ತರವನ್ನು ಕೊಟ್ಟಿದೆ. ಅದು ಹೀಗಿದೆ :- **"ಬೃಹದ್ಭಿಃ ಸವಿತಸ್ತೃಭಿಃ। ವರ್ಷಿಷ್ಠೈರ್ದೇವಮನ್ಮಭಿಃ। ಅಗ್ನೇ ದಕ್ಷೈಃ ಪುನೀಹಿ ಮಾ"** (ಎಲೈ ಸೂರ್ಯದೇವನೆ, ಸಕಲಕರ್ಮಗಳಿಗೂ ಪ್ರೇರಕನಾದ ಅಗ್ನಿಯೆ, ನನ್ನನ್ನು ಅನುಗ್ರಹಿಸಬೇಕೆಂಬ ನಿನ್ನ ಸಂಕಲ್ಪವಿಶೇಷದಿಂದಲೇ ಹಾಗೆ ಮಾಡು; ಈ ಸಂಕಲ್ಪವೆಂಬುದಾದರೂ ಅಮೋಘವೂ ವಿಶಾಲಹೃದಯದ್ದೂ, ಪಾಪಗಳಿಂದ ನನ್ನನ್ನು ದಾಟಿಸಬೇಕೆಂಬ ಆಸೆಯಿಂದ ಬಹಳಕಾಲದಿಂದಲೂ ನಿನ್ನಲ್ಲಿ ಬೇರೂರಿ ಬೆಳೆದುನಿಂತು ಸಾಮರ್ಥ್ಯವನ್ನು ಪಡೆದದ್ದೂ ನನ್ನನ್ನು ಪವಿತ್ರನನ್ನಾಗಿ ಮಾಡುವದರಲ್ಲಿ ಕೌಶಲವುಳ್ಳದ್ದೂ ಆಗಿದೆ).

೨. **"ದೇವಾನಾಂ ರೇತೋ ವರ್ಷಮ್"** ಎಂದು ಶ್ರುತಿಯಲ್ಲಿ ಹೇಳಿರುವಂತೆ ಸಕಲಜಗತ್ತಿನ ಸಸ್ಯ, ಜಂತು, ಪ್ರಾಣಿಗಳೆಂಬ ಸ್ಥಾವರಜಂಗಮಜೀವರಾಶಿಗಳಿಗೂ ಜನ್ಮಸ್ಥಿತಿಗಳಿಗೆ ಕಾರಣವಾದ ಮಳೆಯನ್ನು 'ದೇವತೆಗಳ ವೀರ್ಯ' ಎಂಬ ರೂಪಕವಾಗಿ ವಿಶಾಲಾರ್ಥದಲ್ಲಿ ಗ್ರಹಿಸಬಹುದು. ಈ ಶಬ್ದದಲ್ಲಿ ಯಾವ ಅಶ್ಲೀಲ ಭಾವವೂ ಇಲ್ಲ. ಜಗತ್ತಿನ ಯಾವ ಮೂಲವ್ಯಾಪಾರದಲ್ಲಿಯೂ ಅಶ್ಲೀಲಭಾವವಿರುವದಿಲ್ಲ. ಅದಿರುವದು ವಿಕೃತಮನಸ್ಸುಗಳಲ್ಲಿ ಮಾತ್ರ- ಎಂದು ತಿಳಿಯಬೇಕು.

೩. ನಿರುಕ್ತದ ನೈಘಂಟುಕಾಂಡದಲ್ಲಿ ವೇದಸಂಹಿತೆಗಳಿಂದ ಶೇಖರಿಸಿ ವಿವರಿಸಲ್ಪಟ್ಟಿರುವ ಉದಕಸಂಬಂಧದ ನೂರ ಒಂದು ನಾಮಗಳಿವೆ. ಅವುಗಳಲ್ಲಿ 'ನೀರಂ' ಎಂಬುದೂ ಒಂದು. ಹೊಂದು- ಎಂಬರ್ಥದ 'ಣೀಞ್' ಧಾತುವಿನಿಂದ ಬಂದಿರುವ ಈ ಶಬ್ದವು 'ಜನರಿಂದ ಹೊಂದಲ್ಪಡುತ್ತದೆ, ಅಥವಾ ಒಯ್ಯಲ್ಪಡುತ್ತದೆ, ಶುದ್ಧಿಕಾರಕವಾಗಿದೆ'-ಎಂಬರ್ಥದಲ್ಲಿ ಬಂದಿದೆ. ಕನ್ನಡದ 'ನೀರು' ಶಬ್ದವೂ ಇದರಿಂದಲೇ ಬಂದಿದೆ.

೪. ನಮ್ಮ ದೇಶದಲ್ಲಿರುವಂತೆ ತೀರ್ಥಯಾತ್ರೆಯ ಪದ್ಧತಿಯಾಗಲಿ, ಕುಂಭಮೇಳದಂಥ ಧಾರ್ಮಿಕಸಂಘಟನೆಯಾಗಲಿ ಬೇರೆದೇಶಗಳಲ್ಲಿ ಕಂಡುಬಂದಿಲ್ಲ. ಆದ್ದರಿಂದ ಭಾರತೀಯರಿಗೆ ತೀರ್ಥಗಳ ಬಗ್ಗೆ ಪೂಜ್ಯಕಲ್ಪನೆಯು ವೇದಗಳಲ್ಲಿ ಅಡಗಿರುವ 'ಉದಕ'ತತ್ತ್ವದ ಮೂಲದಿಂದಲೇ ಬಂದಿದೆ.

---

# ಮನಸ್ಸಿಗೆ ಉಪದೇಶ

(ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

೩೭. ಅಶಾಂತಿಯನ್ನು ಮರೆಮಾಚುವದಕ್ಕಾಗಿ ನೀನು ಮಾಡಬಾರದ ಕೃತ್ಯಗಳನ್ನು ಕೆಲವು ಕಾಲ ಮಾಡಿರುವೆ. ಜೂಜು, ಮದ್ಯಪಾನ, ದುಷ್ಟಸಹವಾಸ, ಶೃಂಗಾರದ ಸಂಗೀತ, ಸಿನೆಮ, ನಾಟಕ- ಮುಂತಾದವುಗಳ ಸೇವನೆ, ದೇಶಾಂತರಗಳನ್ನು ತಿರುಗಿ ಬೇರೆಬೇರೆಯ ದೃಶ್ಯಗಳನ್ನು ನೋಡಿಬರುವದು- ಇವುಗಳಿಂದ ಅಶಾಂತಿಯನ್ನು ದೂರಮಾಡಿಕೊಳ್ಳಬೇಕೆಂದು ಹವಣಿಸಿದೆ. ಆದರೆ ಅವುಗಳಿಂದ ಸ್ವಲ್ಪಕಾಲ ಮರೆಯಾದಂತಿದ್ದ ಅಶಾಂತಿಯು ಮತ್ತೂ ಬಲವಾಗಿ ಮರುಕಳಿಸಿತು. ಅಂದಮೇಲೆ ಅವು ಶಾಂತಿಗೆ ಮತ್ತೆ ಹೇಗೆ ಉಪಾಯವಾದಾವು?

೩೮. ನಿನಗೆ ಇಷ್ಟವೆಂದು ತೋರಿದ್ದರ ಪ್ರಾಪ್ತಿ, ಅನಿಷ್ಟವೆಂದು ತೋರಿದ್ದರ ಪರಿಹಾರ- ಇವುಗಳು ಆಗಲು ಸ್ವಲ್ಪಹೊತ್ತು ಏನೂ ಮಾಡದೆ ಇದ್ದೆ. ಆಗ ಶಾಂತಿಯಿದ್ದಂತೆ ಕಂಡುಬಂದಿತು. ಆದರೆ ಮತ್ತೆ ಇಷ್ಟಪ್ರಾಪ್ತಿ, ಅನಿಷ್ಟನಿವೃತ್ತಿ- ಇವುಗಳ ಬೇಟೆಗೆ ಹೋಗಬೇಕೆಂದು ಹವಣಿಸಿದೆ. ಅಂಥ ಸಂದರ್ಭಗಳಲ್ಲಿ ನಿನಗೆ ಶಾಂತಿಯು ಏತಕ್ಕೆ ಬಂತೆಂಬುದನ್ನು ಯೋಚಿಸಬಾರದೆ? ಗಾಢನಿದ್ರೆಯಿದ್ದಾಗಲೂ ನಿನಗೆ ಶಾಂತಿಯಿತ್ತು. ಆಗ ಯಾವ ಸಾಧನದಿಂದ ಶಾಂತಿ ಬಂದಿತ್ತು? ಅದನ್ನು ಯೋಚಿಸು.

೩೯. ಬೆಪ್ಪು ಮನವೆ, ಶಾಂತಿಯು ನಿನ್ನ ಬೆನ್ನುಹಿಂದೆಯೇ ಇದೆ. ಅದಕ್ಕೇ ಪರಮಾತ್ಮನೆಂದು ಹೆಸರು. ಅದನ್ನು ಬಿಟ್ಟು ಮುಂದುಮುಂದಕ್ಕೆ ಏತಕ್ಕೆ ಓಡುತ್ತಿರುವೆ? ಉಪ್ಪುನೀರನ್ನು ಕುಡಿದರೆ ನೀರಡಿಕೆ ಹೋದೀತೇ? ಸಾಕು, ಹಿಂದಿರುಗು. ಶಾಂತಿಯ ಗೂಡು ನಿನ್ನ ಒಳಗೇ ಇದ್ದುಕೊಂಡಿದೆ.

೪೦. ಮನಸ್ಸೆ, ನಿನಗೆ ಅಳವಡದ ಅಥವಾ ಮತ್ತೊಬ್ಬರಿಗೆ ಹೊಂದುಗೆಯಾಗಿರುವದರಿಂದ ಯುಕ್ತವೆಂದು ತೋರುವ ಆಚರಣೆಯನ್ನು ಸಾಧಿಸುವದಕ್ಕೆ ಹೋಗುವದನ್ನು ಬಿಡು. ನಿನಗೆ ಒಗ್ಗುವ ಧರ್ಮದ ಅಭ್ಯಾಸವನ್ನೇ ಮಾಡುತ್ತಿರು. ಅದರಿಂದಲೇ ನಿನಗೆ ಶ್ರೇಯಸ್ಸಾಗುವದು.

೪೧. ಹುಡುಗತನದಲ್ಲಿ ದೊಡ್ಡವರಂತೆ ನಟಿಸುವದಕ್ಕೆ ಹೋಗುವದೂ ದೊಡ್ಡವನಾದ ಮೇಲೂ ಹುಡುಗರಂತೆ ಚೆಲ್ಲಾಟವಾಡುವದೂ ಎಂದಿಗೂ ಸರಿಯಲ್ಲ. ನಿನ್ನ ಸ್ಥಿತಿಯು ಎಷ್ಟರಮಟ್ಟಿಗೆ ಪಕ್ವವಾಗಿದೆಯೋ ಅದನ್ನನುಸರಿಸಿ ನಿನ್ನ ನಡೆನುಡಿಗಳಿಗೆ ಅವಕಾಶವನ್ನು ಕೊಡುವವನಾಗು.

೪೨. ಹೆಂಗಸು ಗಂಡುಭೀರಿಯಾಗಿ ನಡೆಯುವದೂ ಗಂಡಸು ಹೆಂಗಳ ನಡತೆಯನ್ನು ಅನುಕರಿಸುವದೂ ಸರಿಯಾದೀತೆ? ನೀನು ಯಾವ ಸ್ಥಿತಿಯಲ್ಲಿರುವೆಯೋ ಅದನ್ನು ಆಲೋಚಿಸಿ ಮುನ್ನಡೆಯುವವನಾಗು.

---

# ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ

(ಅಧ್ಯಾತ್ಮವಿದ್ಯಾಪ್ರವೀಣ ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿಗಳು)

ಸೂರ್ಯಸೂಕ್ತದ ಆರನೆಯ ಮಂತ್ರವನ್ನು ಈಗ ವಿಚಾರಮಾಡಬೇಕಾಗಿದೆ :-

**ಓಂ ॥ ಅದ್ಯಾ ದೇವಾ ಉದಿತಾ ಸೂರ್ಯಸ್ಯ ನಿರಂಹಸಃ ಪಿಪೃತಾ ನಿರವದ್ಯಾತ್ । ತನ್ನೋ ಮಿತ್ರೋ ವರುಣೋ ಮಾಮಹಂತಾ-ಮದಿತಿಃ ಸಿಂಧುಃ ಪೃಥಿವೀ ಉತ ದ್ಯೌಃ ॥ ೬ ॥**

'ಎಲೈ ಬೆಳಗುವ ಸೂರ್ಯರಶ್ಮಿಗಳೆ, ಈಗ ಆದಿತ್ಯನು ಉದಯಿಸಲಾಗಿ ನೀವು ಅತ್ತಿತ್ತ ಹರಡಿಕೊಂಡವರಾಗಿ ನಮ್ಮನ್ನು ಪಾಪದಿಂದ ಬಿಡಿಸಿ ಕಾಪಾಡಿರಿ. ಈ ನಮ್ಮ ಪ್ರಾರ್ಥನೆಯನ್ನು ಮಿತ್ರ, ವರುಣ, ಅದಿತಿ, ಸಿಂಧು, ಪೃಥಿವೀ ಹಾಗೂ ದ್ಯುಲೋಕದೇವತೆ- ಈ ಆರು ಮಂದಿಯೂ ಗೌರವಿಸಲಿ !"

ಈ ಮಂತ್ರದಲ್ಲಿ ಮೊದಲು ಸೂರ್ಯರಶ್ಮಿದೇವತೆಗಳನ್ನು ಕುರಿತು ಪ್ರಾರ್ಥಿಸಲಾಗಿದೆ. ಸೂರ್ಯೋದಯವಾದ ಕೂಡಲೆ ರಶ್ಮಿಗಳು ಎಲ್ಲೆಲ್ಲೂ ಹರಡಿಕೊಳ್ಳುವವು. ಅವುಗಳ ಸ್ಪರ್ಶವಾದಂತೆಲ್ಲ ಗಿಡಮರ- ಹಕ್ಕಿಪಕ್ಷಿಗಳಿಂದಾರಂಭಿಸಿ ಮನುಷ್ಯನವರೆಗಿನ ಸ್ಥಾವರಜಂಗಮಗಳೆಲ್ಲವೂ ಬೆಳಗುವವು ; ಮತ್ತು ಪವಿತ್ರವಾಗಿಬಿಡುವವು. ಆದ್ದರಿಂದಲೇ ವೈದಿಕಾನುಷ್ಠಾನಗಳನ್ನೆಲ್ಲ ಹಗಲಿನಲ್ಲಿ ಮಾಡುವರು. ರಾತ್ರಿ ಎಂಬುದು ಪಾಪದ ಕಾರ್ಯಗಳಿಗೆ ಪ್ರೇರಕವಾಗಿರುವದು. ಹಗಲಿನಲ್ಲಿ ಹಾಗಾಗಲಾರದು. ಎಲ್ಲೋ ಕೆಲವು ಬಾರಿ ಹಗಲಿನಲ್ಲೂ ದುಷ್ಕಾರ್ಯಗಳನ್ನೆಸಗುವವರು ಇರಬಹುದು. ಆದರೆ ಸತ್ಕಾರ್ಯಗಳು, ಉದ್ಯೋಗಗಳು, ದೇವತಾ-ಪಿತೃ-ಪೂಜಾದಿಗಳು, ಮನುಷ್ಯರಿಗೆ ಮಾಡುವ ಸತ್ಕಾರಗಳು-ಎಲ್ಲವೂ ಹಗಲಿನಲ್ಲಿ ಹೆಚ್ಚು. ಇದಕ್ಕೆ ಕಾರಣವೇನೆಂದರೆ : ಸೂರ್ಯರಶ್ಮಿಗಳ ಸಂಪರ್ಕವಿರುವದೇ ಆಗಿರುತ್ತದೆ. ಅವು ಕರ್ತೃಗಳನ್ನೂ ಇತರರನ್ನೂ ಶುದ್ಧಗೊಳಿಸುವವು. ಪಾಪಗಳಿಂದ ಬಿಡುಗಡೆ ಮಾಡಿಸುವವು. ಕರ್ಮಗಳೆಲ್ಲವೂ ಸರ್ವರಿಗೂ ಗೊತ್ತಾಗುವಂತೆ ಪ್ರಕಾಶಗೊಳಿಸುವವು. ಮತ್ತು ಕರ್ಮಗಳಿಗೆ ಅನುಕೂಲಗಳನ್ನು ಒದಗಿಸಿಕೊಡುವವು. ಉದಾಹರಣೆಗೆ ಸೂರ್ಯನ ಕಿರಣಗಳ ಸ್ಪರ್ಶವಿಲ್ಲದೆ ಹೂವುಗಳು ಅರಳುವದಿಲ್ಲ. ಹೂವುಗಳಿಲ್ಲದೆ ದೇವರ ಪೂಜೆಯು ಶೋಭಿಸುವದಿಲ್ಲ. ಹೀಗೆ ಕಿರಣಗಳ ಉಪಕಾರವು ಅಪಾರವಾಗಿದೆ. ಇಂಥ ದೇವತೆಗಳನ್ನು ಹೊಗಳಿ ಋಷಿಯು ಪಾಪಗಳಿಂದ ಬಿಡುಗಡೆ ಮಾಡುವಂತೆ ಕೇಳಿಕೊಂಡಿರುತ್ತಾನೆ. ಹಾಗೆಯೇ ತನ್ನ ಈ ಪ್ರಾರ್ಥನೆಯನ್ನು ಆರು ದೇವತೆಗಳು ಗೌರವಿಸಲಿ-ಎಂದೂ ಬೇಡುತ್ತಿದ್ದಾನೆ. ಆ ದೇವತೆಗಳು ಯಾರೆಂದರೆ : ೧) ಮಿತ್ರನು. (ಹಗಲಿಗೆ ಅಭಿಮಾನಿದೇವತೆ). ಇವನು ಸಾವಿನಿಂದ ನಮ್ಮನ್ನು ಪಾರುಮಾಡುವವನು ಎಂದು ಭಾಷ್ಯಕಾರರು ವಿವರಿಸಿದ್ದಾರೆ. ಕಾಲಮೃತ್ಯುವು ಎಲ್ಲರಿಗೂ ಅನಿವಾರ್ಯವಾದರೂ ಅಕಾಲಮೃತ್ಯುವನ್ನು ದೂರವಿಡಬೇಕಾದದ್ದು

ಅಗತ್ಯವಾಗಿದೆ. ಮಿತ್ರದೇವನು ಅಕಾಲಮೃತ್ಯುವಿನಿಂದ ನಮ್ಮನ್ನು ಪಾರುಮಾಡು ವವನಾಗಿರುತ್ತಾನೆ. ೨) ವರುಣನು (ರಾತ್ರಿಗೆ ಒಡೆಯನು) ಎರಡನೆಯವನು. ಈತನು ಅನಿಷ್ಟಗಳಿಂದ ನಮ್ಮನ್ನು ಬಿಡುಗಡೆಮಾಡಿಸುವವನು. ನಮಗೆ ಬೇಡ ವಾದದ್ದು ಎಂದರೆ ನಮ್ಮ ಮನಸ್ಸಿನ ಇಚ್ಛೆಗನುಗುಣವಾಗಿ-ಎಂದರ್ಥವಲ್ಲ. ಉದಾ ಹರಣೆಗೆ ಬೆಳಗ್ಗೆ ಮುಂಚಿತವಾಗಿ ಏಳುವದು ನಮಗೆ ಬೇಡವಾಗಿರಬಹುದು. ಅಂಥವು ಗಳಿಂದ ಪಾರುಗಾಣಿಸುವದು ವರುಣನ ಕೆಲಸವಲ್ಲ. ಮತ್ತೇನೆಂದರೆ ರೋಗರುಜಿನ ಗಳು, ದುಸ್ಸ್ವಪ್ನ, ದುಃಶ್ಶಕುನ, ದುರ್ಗತಿ, ದೌರ್ಮನಸ್ಯ, ದುರ್ಭಿಕ್ಷ, ದುರ್ವ್ಯಸನಾದಿ, ಅನಿಷ್ಟಗಳಿಂದ ಕಾಪಾಡುವವನು-ಎಂದರ್ಥ. ೩) ಅದಿತಿ (ದೇವಮಾತೆ)ಯೆಂಬವಳು. ಈಕೆಯು ಅಖಂಡನೀಯಳು- ಎಂದರೆ ಭೇದವನ್ನು ಎಣಿಸದವಳು. ಹಾಗೂ ನಮ್ಮಲ್ಲಿಯೂ ಒಳಹೊಕ್ಕು ಭೇದಬುದ್ಧಿಯನ್ನು ನೀಗುವವಳು ೪) ಸಿಂಧು ದೇವತೆಯು ಮತ್ತೊಬ್ಬಳು. ಹರಿಯುವ ಸ್ವಭಾವವುಳ್ಳ ಉದಕದೇವತೆಯೇ ಇವಳು. ೫) ಪೃಥಿವೀದೇವತೆಯು ಸುಪ್ರಸಿದ್ಧಳೇ ಆಗಿರುವಳು. ೬) ದ್ಯುಲೋಕದೇವತೆಯು ಇನ್ನೊಬ್ಬಳು- ಹೀಗೆ ಆರು ದೇವತೆಗಳೂ ನನ್ನ ಪ್ರಾರ್ಥನೆಯನ್ನು ಗೌರವಿಸಿ ಸೂರ್ಯಕಿರಣಗಳ ಸ್ಪರ್ಶದಿಂದ ನನ್ನನ್ನೂ ನನ್ನ ಸುತ್ತುವಳಿಯವನ್ನೂ ಅಂತರಂಗ-ಬಹಿರಂಗ ಪ್ರಪಂಚವನ್ನೂ ಪರಿಶುದ್ಧಿಗೊಳಿಸಲಿ- ಎಂದು ಋಷಿಯು ಸ್ತುತಿಸಿರು ತ್ತಾನೆ. ಈ ಸೂಕ್ತವು ಇಲ್ಲಿಗೆ ಪೂರೈಸಿದೆ. ಇನ್ನು ಮುಂದೆ ಪುನಃ ಸೂರ್ಯದೇವತಾಕ ವಾದ ಎರಡು ಮಂತ್ರಗಳ (ಋಗ್ವೇದ ೨-೩-೨೩) ವಿವರಣೆಯನ್ನು ನೋಡೋಣ:-

**ಓಂ॥ ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ**
**ಸುಪರ್ಣೋ ಗರುತ್ಮಾನ್ । ಏಕಂ ಸದ್ವಿಪ್ರಾ ಬಹುಧಾ**
**ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥ ೧ ॥**

"ಈ ದೇವನನ್ನು ಇಂದ್ರನೆಂದೂ ಮಿತ್ರ, ವರುಣ, ಅಗ್ನಿ ಹಾಗೂ ಶೋಭನ ವಾದ ರೆಕ್ಕೆಯುಳ್ಳ ಗರುಡ,-ಎಂದೂ ಕರೆಯುವರು. ಇರುವ ಒಬ್ಬನನ್ನೇ ವಿಪ್ರರು ಬಹು (ನಾಮ)ಗಳಿಂದ ವ್ಯವಹರಿಸುವರು. ಅಗ್ನಿ, ಯಮ, ಮಾತರಿಶ್ವನೆಂದೂ ಹೆಸರಿಸುವರು" ಎಂದು ಭಾವಾರ್ಥ.

ಈ ಮಂತ್ರದಲ್ಲಿ ಆದಿತ್ಯನನ್ನು ಸರ್ವದೇವಾತ್ಮಕನೆಂದು ಸ್ತುತಿಸಲಾಗಿದೆ. ಬ್ರಹ್ಮವು ಸರ್ವದೇವಾತ್ಮಕವೆಂಬುದು ಸುಪ್ರಸಿದ್ಧವಾಗಿದೆ. ಆದಿತ್ಯನಾದರೊ, ಬ್ರಹ್ಮ ಕ್ಕಿಂತ ಬೇರೆಯಲ್ಲವಾದ್ದರಿಂದ ಈ ಸ್ತುತಿಯು ಆದಿತ್ಯನಿಗೂ ಹೊಂದುತ್ತದೆ. ಬ್ರಹ್ಮದ ಸ್ತುತಿಯು ಯಾವ ದೇವತಾವಿಶೇಷಕ್ಕಾದರೂ ಹೊಂದಬಹುದು. ಆದರೆ ನಾಮ ರೂಪಗಳೆಂಬ ಉಪಾಧಿಗಳ ಸಂಪರ್ಕವಿಲ್ಲದೆ 'ನೇತಿ ನೇತಿ' ಎಂಬೀ ರೀತಿಯಿಂದ ಸ್ತುತಿಸಿದಾಗ ಮಾತ್ರ ಅಂಥ ಮಂತ್ರಗಳು ಅಸಾಧಾರಣವಾಗಿದ್ದು ಪರಬ್ರಹ್ಮ ವೊಂದಕ್ಕೆ ಮಾತ್ರವೇ ಹೊಂದುವವು. ಈ ಮಂತ್ರದಲ್ಲಿ ಹಾಗೇನಿಲ್ಲ. ಆದ್ದರಿಂದ ಇದಕ್ಕೆ ಆದಿತ್ಯಪರವಾದ ಅರ್ಥವನ್ನು ಮಾಡಿ ಇದರ ಅಭಿಪ್ರಾಯವನ್ನು ಚಿಂತಿ

ಸೋಣ. ಆದಿತ್ಯನನ್ನು ಇಂದ್ರನೆಂದಿರುವದು ಸಮರ್ಪಕವಾಗಿದೆ. ಏಕೆಂದರೆ ಹೆಚ್ಚು ಪ್ರಕಾಶಮಾನನಾಗಿದ್ದು- ಇಂಧತೇ ಇತಿ ಇಂದ್ರಃ ಎಂದು ಅರ್ಥಮಾಡಬಹುದಾಗಿದೆ. ಜಗತ್ತಿನಲ್ಲಿ ಆದಿತ್ಯನಿಗಿಂತ ಪ್ರಕಾಶಮಾನವಾದ ತೇಜಸ್ಸು ಮತ್ತೊಂದಿಲ್ಲ-ಎಂಬಿದು ನಮ್ಮೆಲ್ಲರ ಅನುಭವವು. ಹಾಗೆಯೇ ಮಿತ್ರನೆಂದೂ ಇವನನ್ನು ಸ್ತುತಿಸಲಾಗಿದೆ. ಭಾಷ್ಯದಲ್ಲಿ "ಪ್ರಮೀತೇರ್ಮರಣಾತ್ ತ್ರಾತಾರಂ ಮಿತ್ರಂ' ಎಂದು ವಿವರಣೆ ನೀಡಿರುತ್ತಾರೆ. ಸಾವು ಎಂಬುದರಿಂದ ನಮ್ಮನ್ನು ಕಾಪಾಡುವವನು ಮಿತ್ರನು- ಎಂದರ್ಥ. ಯಾವನು ಈ ಮಿತ್ರನೆನಿಸಿರುವ ಆದಿತ್ಯನನ್ನು ಉಪಾಸನೆಮಾಡಿ ಸೂರ್ಯಮಂಡಲದ್ವಾರದಿಂದ ಬ್ರಹ್ಮಲೋಕವನ್ನು ಸೇರಿಬಿಡುವನೋ ಅಂಥವನು ಈ ಸಂಸಾರಮಂಡಲದಲ್ಲಿ ಮತ್ತೆ ಹುಟ್ಟುವದಿಲ್ಲ. ಆದ್ದರಿಂದಲೇ ಮರಣವೂ ಆತನಿಗೆ ಸಂಭವಿಸುವದಿಲ್ಲ. ಹೀಗೆ ಆದಿತ್ಯನು ಅಹರಭಿಮಾನಿದೇವತೆಯೂ ಆಗಿದ್ದು ಕ್ರಮ ಮುಕ್ತಿಗೆ ಕಾರಣನಾಗಿದ್ದು ಮಿತ್ರನೆನಿಸಿರುವನು. ವರುಣನೆಂದರೆ ಪಾಪನಿವಾರಕ ನೆಂದು ಈಗಾಗಲೇ ವಿವರಿಸಿದ್ದಾಗಿದೆ. ಅಗ್ನಿಯೆಂದೂ ಈತನನ್ನು ಸ್ತುತಿಸಿದೆ. "ಅಗ್ರೇ ಗಚ್ಛತೀತ್ಯಗ್ನಿಃ" ಎಂಬ ವ್ಯುತ್ಪತ್ತಿಯಂತೆ ಶಾಖರೂಪದಿಂದ ಎಲ್ಲಾ ಪ್ರಾಣಿ ಗಳ ಒಳಹೊಕ್ಕು ಅಗ್ರಗಣ್ಯನೂ ಸೃಷ್ಟಿಪ್ರವರ್ತಕನೂ ಆಗಿರುವನು. ಹಾಗೂ ಸಾಯಂಕಾಲದಲ್ಲಿ ತನ್ನ ತೇಜಸ್ಸನ್ನು ಪ್ರಸಿದ್ಧವಾದ ಅಗ್ನಿಯಲ್ಲಿಟ್ಟುಬಿಡುವದರಿಂದ ಅಗ್ನಿನಾಮಕನಾಗಿಯೂ ಸ್ತುತಿಸಲ್ಪಡುವನು. ಮಹಾಕವಿ ಕಾಳಿದಾಸನೂ ಕೂಡ "ದಿನಾಂತೇ ನಿಹಿತಂ ತೇಜಃ ಸವಿತ್ರೇವ ಹುತಾಶನಃ' ಎಂದು ಉಪಮಾನವನ್ನು ನೀಡಿ ಸೂರ್ಯನು ಅಗ್ನಿಯಲ್ಲಿ ತನ್ನ ತೇಜಸ್ಸನ್ನಿಡುವನೆಂದು ವರ್ಣಿಸಿದ್ದಾನೆ. ಹಾಗೆಯೇ ದ್ಯುಲೋಕದಲ್ಲಿರುವ ಸುಪರ್ಣನೆಂಬ ಗರುತ್ಮಂತನೂ ಈತನೇ-ಎಂದು ವೇದವು ಸ್ತುತಿಸುತ್ತಿದೆ. ಸುಪರ್ಣವೆಂಬ ಪಕ್ಷಿಯೆಂದು ಪರಮಾತ್ಮನನ್ನು ಹೊಗಳಿರು ವದು "ದ್ವಾಸುಪರ್ಣಾ" "ಸುಪರ್ಣಂ ವಿಪ್ರಾಃ ಕವಯೋ ವಚೋಭಿಃ" ಎಂಬೀ ಮಂತ್ರಗಳಲ್ಲಿ ಕಂಡುಬರುತ್ತದೆ. ಸುಪರ್ಣನಂತೆ ಪ್ರಕಾಶಮಾನನಾಗಿರುವ, ಹಾಗೂ ಸಂಚರಿಸುವ ಸ್ವಭಾವವುಳ್ಳವನು ಸೂರ್ಯನು-ಎಂದು ಅರ್ಥಮಾಡಬೇಕು. ಮತ್ತು ಗರಣ(ನುಂಗುವ) ಸ್ವಭಾವವುಳ್ಳವನಾದ್ದರಿಂದ ಗರುತ್ಮಾನ್ ಎಂದೂ ಅರ್ಥ ಮಾಡಿದೆ. ಪ್ರಲಯಕಾಲದಲ್ಲಿ ಪೃಥಿವ್ಯಾದಿಗಳು ತೇಜಸ್ಸಿನಲ್ಲಿ ಲಯವಾಗುವವು. ಸಕಲಜೀವರುಗಳೂ ಆದಿತ್ಯನಲ್ಲಿ ಒಂದಾಗುವರು. ಇಂಥ ಗರುತ್ಮಂತನೀತನು- ಎಂದಭಿಪ್ರಾಯ.

ಈಗ "ಏಕಂ ಸತ್...." ಎಂಬ ಉತ್ತರಾರ್ಧದ ಅರ್ಥವನ್ನು ಅನುಸಂಧಾನ ಮಾಡೋಣ. ವಿಪ್ರರು ಎಂದರೆ ಮೇಧಾವಿಗಳೂ ದೇವತಾತತ್ತ್ವವನ್ನು ಬಲ್ಲವರೂ ಮಂತ್ರದ್ರಷ್ಟಾರರೂ ಆದ ಋಷಿಗಳು-ಎಂದರ್ಥ. ಇಂಥ ಮಹನೀಯರು ಈ ಆದಿತ್ಯ ನೊಬ್ಬನನ್ನೇ ಬಹುಪ್ರಕಾರವಾದ ನಾಮಗಳಿಂದ ಕರೆಯುತ್ತಿರುವರು. ಇದು ಸಾಪೇಕ್ಷವಾಗಿ ಆಗಿರುವ ವ್ಯವಹಾರವು. ಹೇಗೆ ಒಬ್ಬ ವ್ಯಕ್ತಿಯನ್ನು ಹೆಂಡತಿಯು ಗಂಡನೆಂದೂ ಮಗನು ತಂದೆಯೆಂದೂ ತಮ್ಮನು ಅಣ್ಣನೆಂದೂ ತಂದೆಯು ಮಗ

ನೆಂದೂ ಸೇವಕನು ಬುದ್ಧಿಯವರೆಂದೂ ನೌಕರನು "ಸಾಹೇಬರು" ಎಂದೂ ಸ್ನೇಹಿತನು ಮಿತ್ರನೆಂದೂ ಕರೆಯುವರೋ ಹಾಗೆಯೇ ಸಾಪೇಕ್ಷವಾಗಿ ಆಯಾ ಕರ್ಮನಾಮಗಳಿಂದ ಆದಿತ್ಯನನ್ನು ಬಹುಪ್ರಕಾರವಾಗಿ ಬಲ್ಲವರು ಕರೆಯುತ್ತಾರೆ. ಇದರಿಂದ ಸಿದ್ಧವಾಗುವದೇನೆಂದರೆ : ವೇದಗಳಲ್ಲಿ ಏಕದೇವತಾವಾದವೇ ಪ್ರತಿಪಾದಿಸಲ್ಪಟ್ಟಿದೆ- ಎಂದು ಗೊತ್ತಾಗುತ್ತದೆ. ದೇವರು ಒಬ್ಬನೇ-ಎಂದು ಹೇಳುವ ಮಾತು ಈ ವೇದಪ್ರಸಿದ್ಧಿಯಿಂದಲೇ ಬಂದಿದೆ. ನಾನಾ ಹೆಸರುಗಳಿಂದ ವ್ಯವಹರಿಸಲ್ಪಟ್ಟಾಗಲೂ ಏಕದೇವತಾಸಿದ್ಧಾಂತಕ್ಕೆ ಹಾನಿಯಿರುವದಿಲ್ಲ. ಇದರಿಂದ ಎಲ್ಲಾ ಮತಗಳಿಂದ ಪ್ರತಿಪಾದ್ಯನಾದ ದೇವರೂ ಈತನೊಬ್ಬನೇ-ಎಂದು ತಿಳಿಯಬಹುದು. ಹಿಂದೂ-ಸಿಖ್-ಮುಸಲ್ಮಾನ-ಕ್ರೈಸ್ತ-ಜೈನ-ಬೌದ್ಧಾದಿ ಮತಗಳವರೆಲ್ಲರೂ ಸರ್ವಸಮ್ಮತವಾಗಿ ಅನುಭವಪೂರ್ವಕವಾಗಿ ಸೂರ್ಯನು ಒಬ್ಬನೇ, ಅವನೇ ಪ್ರಪಂಚದ ಬೆಳಕು-ಎಂಬಿದನ್ನು ಒಪ್ಪಿದ್ದಾರೆ. ಸೂರ್ಯನು ನಮಗೆ ಬೇಡ, ಆತನು ಬೆಳಕಲ್ಲ, ಉಷ್ಣನಲ್ಲ ; ಅವನ ಕಿರಣಗಳನ್ನು ನಾವು ಮಾನ್ಯಮಾಡುವದಿಲ್ಲ-ಎಂದು ಹೇಳುವ ಯಾವ ಮತವೂ ಈವರೆಗೆ ತಲೆಯೆತ್ತಿರುವದಿಲ್ಲ. ಅಷ್ಟೇ ಅಲ್ಲ. ಮತಧರ್ಮಗಳ ಸ್ಥಾಪಕರೂ ಗ್ರಂಥಗಳೂ, ಪ್ರಚಾರಕರೂ, ಅನುಯಾಯಿಗಳೂ ಎಲ್ಲರೂ ಸೂರ್ಯನ ಬೆಳಕಿನಲ್ಲಿಯೇ ತಮ್ಮ ಕಾರ್ಯಗಳನ್ನು ನಿರ್ವಹಿಸಿದ್ದಾರೆ, ಈಗಲೂ ನಿರ್ವಹಿಸುತ್ತಿದಾರೆ-ಎಂಬಿದು ಸೂರ್ಯಪ್ರಕಾಶದಷ್ಟೇ ಸತ್ಯವಾದ ಸಂಗತಿಯಾಗಿದೆ. ಸೂರ್ಯನನ್ನು ಕಾಣೆವು-ಎನ್ನುವವರು ಕುರುಡರೆನಿಸುವರೇ ಹೊರತು ಜ್ಞಾನಿಗಳೆನಿಸಲಾರರು. ಇಂಥ ಆದಿತ್ಯನು ಒಬ್ಬನೇ- ಎಂಬುದನ್ನು ಬಲ್ಲ ವಿಪ್ರರು ಆತನನ್ನು ನಾನಾ ಹೆಸರುಗಳಿಂದ ಕರೆದರು- ಎಂಬುದು ವೇದವು ನಮಗೆ ತಿಳಿಸುತ್ತಿರುವ ಅಪೂರ್ವವಾದ ಉಪದೇಶವಾಗಿದೆ.

ಈಗ ಈತನನ್ನೇ ಅಗ್ನಿಯೆಂದು ಮತ್ತೊಮ್ಮೆ ತಿಳಿಸಲಾಗಿದೆ. ಈ ಮಂತ್ರದಲ್ಲಿ ಎರಡನೆಯಬಾರಿಗೆ ಬಂದಿರುವ ಅಗ್ನಿಶಬ್ದಕ್ಕೆ ವೈದ್ಯುತಾಗ್ನಿ-ಎಂದು ಅರ್ಥಮಾಡಿದೆ. ಮಿಂಚಿನ ಹಾಗೂ ವಿದ್ಯುಚ್ಛಕ್ತಿಯ ರೂಪದಲ್ಲಿರುವವನೂ ಸೂರ್ಯನೇ ಎಂಬರ್ಥ. ಬ್ರಹ್ಮವು ಅಧಿದೈವವಾಗಿ ಸೋಪಾಧಿಕವಾಗಿ ತೋರಿಕೊಂಡಿರುವ ರೂಪವೇ ವಿದ್ಯುತ್ತು-ಎಂದು ಉಪನಿಷತ್ತಿನಲ್ಲಿದೆ. ಅನಂತರ ಯಮ, ಮಾತರಿಶ್ವ-ನೆಂದೂ ಕರೆಯುತ್ತಾರೆ-ಎಂಬಿದರ ಅಭಿಪ್ರಾಯವು ಹೀಗಿದೆ. "ರಶ್ಮೀನಾ ಸಂಯಮನಾದ್ ಯಮಃ'' ರಶ್ಮಿಗಳನ್ನೆಲ್ಲ ತನ್ನೊಳಕ್ಕೆ ಎಳೆದುಕೊಳ್ಳುವವನು ಹಾಗೂ ಎಲ್ಲರನ್ನೂ ನಿಯಮನಮಾಡುವದರಿಂದಲೂ ಯಮನು-ಎಂದು ಹೇಳಬಹುದು. 'ಮಾತರಿ ಎಂದರೆ ಅಂತರಿಕ್ಷದಲ್ಲಿ ಶ್ವಯತಿ-ಗಚ್ಛತಿ' (ಹೋಗುತ್ತಾನೆ) ಎಂಬ ವ್ಯುತ್ಪತ್ತಿಯಿಂದ ಆದಿತ್ಯನು ಮಾತರಿಶ್ವನೆನಿಸಿರುವನು. ಹೀಗೆ ನಾನಾ ನಾಮಗಳಿಂದ ಸ್ತುತಿಸಲ್ಪಡುವ ಆದಿತ್ಯನು ಈ ಮಂತ್ರದಲ್ಲಿ ಹೇಳಲ್ಪಟ್ಟಿರುವನೆಂದು ತಿಳಿಯಬೇಕು.

———

# ಶನೈಶ್ಚರವ್ರತ

(ಅಧ್ಯಾತ್ಮವಿದ್ಯಾಪ್ರವೀಣ ಶ್ರೀ ಕೆ. ಜಿ. ಸುಬ್ರಾಯಶರ್ಮರು, ಬೆಂಗಳೂರು)

ವ್ರತಗಳ ವಿವರಣಾತ್ಮಕವಾದ ಲೇಖನಮಾಲೆಯಲ್ಲಿ ಕ್ರಮಪ್ರಾಪ್ತವಾದ ಶುಕ್ರವಾರವ್ರತವನ್ನು ತಿಳಿಸಬೇಕಾಗಿದೆ. 'ವರಮಹಾಲಕ್ಷ್ಮೀವ್ರತ'ವೊಂದನ್ನು ಬಿಟ್ಟರೆ ಬೇರೆ ಯಾವ ಶುಕ್ರವಾರವ್ರತವನ್ನೂ ನಿಬಂಧಕಾರರು ತಿಳಿಸಿರುವದಿಲ್ಲ. ವರಲಕ್ಷ್ಮೀವ್ರತದ ವಿಚಾರವಾಗಿ ಈಗಾಗಲೆ ಅಧ್ಯಾತ್ಮಪ್ರಕಾಶದ 1981ರ ಜನವರಿ ಸಂಚಿಕೆಯಲ್ಲಿ ವಿವರಿಸಿರುತ್ತೇನೆ. ಪುನರುಕ್ತಿದೋಷಪರಿಹಾರಕ್ಕಾಗಿ ಈಗ ಮತ್ತೆ ಅದನ್ನು ಕುರಿತು ಪ್ರಸ್ತಾಪಿಸಿಲ್ಲ. ಆದ್ದರಿಂದ ಶನೈಶ್ಚರವ್ರತವನ್ನು ವಿಚಾರಕ್ಕೆ ತೆಗೆದುಕೊಳ್ಳುವೆನು.

ಶನಿ ಎಂಬುದು ನವಗ್ರಹಗಳಲ್ಲೊಬ್ಬನಾದ ದೇವತೆಯ ಹೆಸರು. ಈಶ್ವರ ಶಬ್ದವನ್ನು ಕೊನೆಯಲ್ಲಿ ಜೋಡಿಸಿದರೆ 'ಶನೀಶ್ವರ' ಎಂಬ ನಾಮವಾಗುವದು. ಗ್ರಹಗಳಲ್ಲಿ ಬಹಳ ವಿಳಂಬ (ಮಂದ)ಗತಿಯಿಂದ ಸಂಚರಿಸುವವನೇ ಶನಿಯು. ಏಕೆಂದರೆ ಆತನ ಸಂಚಾರಪಥವೇ ಬಹಳ ದೊಡ್ಡದು. ಆದ್ದರಿಂದ ಚಂದ್ರನು ಎರಡೂವರೆದಿನಗಳಲ್ಲಿ ಒಂದು ರಾಶಿಯನ್ನು ದಾಟಿದರೆ ಶನಿಯು ಅದನ್ನು ದಾಟಲು ಎರಡೂವರೆವರ್ಷಗಳ ಕಾಲವೇ ಬೇಕಾಗುವದು. ಹೀಗೆ ಗ್ರಹಗಳಲ್ಲಿ ಬಹಳ ಮಂದ ಗತಿಯುಳ್ಳವನಾದ ಶನಿಯನ್ನು 'ಮಂದ'ನೆಂಬ ಹೆಸರಿನಿಂದಲೂ ಕರೆಯುತ್ತಾರೆ. ಉಳಿದ ಗ್ರಹಗಳೆಲ್ಲರೂ ಅತಿ ಶೀಘ್ರಗತಿಯಾದ ಚಂದ್ರನಿಗೂ ಅತಿ ಮಂದಗತಿಯಾದ ಶನಿಗೂ ನಡುವಿನ ಕಾಲವ್ಯವಧಾನದಲ್ಲಿ ಒಂದೊಂದು ರಾಶಿಯನ್ನು ದಾಟುತ್ತಾರೆ. ಜ್ಯೋತಿಷ್ಯಸಿದ್ಧಾಂತದಂತೆ ಶನಿಗೆ ವಕ್ರಗತಿಯೂ ಉಂಟು. ಎಂದರೆ ನಕ್ಷತ್ರಗಳ ಪಾದಗಳನ್ನು ದಾಟುವಾಗ ಕೆಲವು ಸಲ ಹಿಂದಕ್ಕೆ (Reverse) ಬರುತ್ತಾನೆ. ಸೂರ್ಯಚಂದ್ರರಿಗೆ ಮಾತ್ರ ವಕ್ರಗತಿಯಿರುವದಿಲ್ಲ. ಆದ್ದರಿಂದಲೇ ಸೋಮವಾರದ ನಂತರ ಮಂಗಳವಾರವೇ ಹೊರತು ಮತ್ತೆ ಭಾನುವಾರವು ಬರುವದಿಲ್ಲ. ಇದು ಹಾಗಿರಲಿ. ಅಂತೂ ಮೆಲ್ಲಗೆ ದಾಟುವ ಶನಿಯನ್ನು ಸಂಸ್ಕೃತಭಾಷೆಯಲ್ಲಿ 'ಶನೈಃ ಚರತಿ ಇತಿ ಶನೈಶ್ಚರಃ' ಎಂಬ ವ್ಯುತ್ಪತ್ತಿಯಂತೆ 'ಶನೈಶ್ಚರ'ನೆಂದೂ ಕರೆಯುತ್ತಾರೆ. ಶನೇಶ್ವರ, ಶನೈಶ್ವರ-ಎಂಬ ಕನ್ನಡಪ್ರಯೋಗಗಳು ತಪ್ಪು. ಈ ದೇವತೆಯನ್ನು ಕುರಿತು ಶನಿವಾರದ ದಿನ ಮಾಡುವ ಪೂಜೆಯೇ ಶನೈಶ್ಚರವ್ರತವು.

'ಶನಿಮಾಹಾತ್ಮ್ಯ'ವೆಂದು ಈಗ ಪ್ರಸಿದ್ಧವಾಗಿರುವ ವಿಕ್ರಮಾದಿತ್ಯನ ಕಥೆಯು ಈವರೆಗೂ ನನಗೆ ಯಾವ ಪುರಾಣಗ್ರಂಥಗಳಲ್ಲಿಯೂ ದೊರೆತಿಲ್ಲ. ನಿಬಂಧ ಕಾರರೂ ವಿಕ್ರಮಾದಿತ್ಯನ ಕಥೆಯನ್ನು ಪ್ರಸ್ತಾಪಿಸಿಲ್ಲ. ಆದರೆ ಕನ್ನಡದಲ್ಲಿ ಗದ್ಯ-ಪದ್ಯ-ನಾಟಕಗಳ ಮಾಧ್ಯಮದಿಂದ ಪ್ರಸಿದ್ಧವಾಗಿರುವ ಈ ಕಥೆಗೆ ಮೂಲವೇನೆಂಬುದು ತಿಳಿಯದು. ಸ್ಕಾಂದಪುರಾಣದಲ್ಲಿ ದಶರಥಮಹಾರಾಜನು ಶನಿಮಹಾತ್ಮನನ್ನು ಆರಾಧನೆಮಾಡಿ ವರವನ್ನು ಪಡೆದುಕೊಂಡ ವಿಚಾರವಾಗಿ ಕಥೆಯಿದೆಯೆಂದು

ನಿಬಂಧಕಾರರು ತಿಳಿಸಿದ್ದಾರೆ. ಅದಕ್ಕೆ ಅನುಗುಣವಾಗಿ ಈಗ ಪ್ರಸ್ತಾಪಿಸುವೆನು. ಪೂಜಾವಿಧಾನವನ್ನು ಸಂಕ್ಷೇಪವಾಗಿ ಹೀಗೆ ತಿಳಿಸಿದೆ. ಶ್ರಾವಣಮಾಸದ ಶನಿವಾರಗಳಲ್ಲಿ ಈ ವ್ರತವನ್ನು ಮಾಡಬೇಕು. ಬೆಳಗ್ಗೆ ಸ್ನಾನಮಾಡಿ– ಎಂದರೆ ತೈಲಾಭ್ಯಂಗನವನ್ನು ಮಾಡಿಕೊಂಡು ನಿತ್ಯಕರ್ಮಗಳ ಅನಂತರ ಬನ್ನಿಮರದ ಬುಡ ಅಥವಾ ಅರಳೀಮರದ ಬುಡದಲ್ಲಿ ಶನಿಯನ್ನು ಪೂಜಿಸಬೇಕು. ಎಳ್ಳಿನ ರಾಶಿಯ ಮೇಲೆ ಬಿಲ್ಲಿನ ಆಕಾರದ ಚಿತ್ರವನ್ನು ಬರೆದು ನೀಲರತ್ನದಿಂದ ಅಲಂಕೃತವಾದ ಚಿನ್ನದ ಶನಿಪ್ರತಿಮೆಯನ್ನು ಸ್ಥಾಪಿಸಿ 'ಶಮಗ್ನಿಃ' ಎಂಬ ಮಂತ್ರದಿಂದಾವಾಹಿಸಿ ಪೂಜಿಸಬೇಕು. ಗಂಧಪುಷ್ಪಧೂಪದೀಪಾದಿ ಉಪಚಾರಗಳ ಅನಂತರ ಎಳ್ಳು, ಉದ್ದಿನ ಅನ್ನ– ಭಕ್ಷ್ಯಗಳನ್ನು ನೈವೇದ್ಯಮಾಡಿ ಪೂಜೆಯನ್ನು ಮುಗಿಸಬೇಕು. ಉದ್ಯಾಪನೆಮಾಡುವಾಗ ಹೋಮವನ್ನೂ ಆಚರಿಸಿ ಕಡೆಯಲ್ಲಿ ಚಿನ್ನದ ಶಮೀವೃಕ್ಷವನ್ನೂ ಕಬ್ಬಿಣದ ಶನಿದೇವನ ಪ್ರತಿಮೆಯನ್ನೂ ಕಪ್ಪು ಹಸು– ಕರುಗಳನ್ನೂ ದಾನಮಾಡಬೇಕು. ಏಳು ಜನ ಬ್ರಾಹ್ಮಣರಿಗೆ ವಸ್ತ್ರದಾನ–ದಕ್ಷಿಣೆಗಳನ್ನು ಕೊಡಬೇಕು. ಅವರುಗಳ ಆಶೀರ್ವಾದವನ್ನು ಪಡೆಯಬೇಕು. ಕಡೆಯಲ್ಲಿ ದಶರಥನು ಮಾಡಿದ ಶನಿಸ್ತೋತ್ರವನ್ನು ಪಠಿಸಬೇಕು–ಹೀಗೆಂದು ವ್ರತವಿಧಾನದಲ್ಲಿ ತಿಳಿಸಿದೆ. ಈಗ ಕಥಾಭಾಗವನ್ನು ವಿಚಾರಮಾಡೋಣ.

ತ್ರೇತಾಯುಗದಲ್ಲಿ ದಶರಥಮಹಾರಾಜನು ರಾಜ್ಯಭಾರಮಾಡುತ್ತಿರುವ ಕಾಲಕ್ಕೆ ಜ್ಯೋತಿಷ್ಕರು ತಿಳಿಸಿದಂತೆ ಶನಿಗ್ರಹವು "ರೋಹಿಣೀಶಕಟಭೇದ"ವೆಂಬ ದುರ್ಯೋಗವನ್ನುಂಟುಮಾಡಲಿರುವದರಿಂದ ಹನ್ನೆರಡುವರ್ಷಕಾಲ ದುರ್ಭಿಕ್ಷವು ಸಂಭವಿಸುತ್ತದೆಯೆಂದು ಗೊತ್ತಾಯಿತು. ಆಗ ರಾಜನು ತನ್ನ ಆತ್ಮಶಕ್ತಿಯಿಂದ ಶನಿಮಂಡಲಕ್ಕೇ ಪ್ರಯಾಣಮಾಡಿ ಆತನ ಸಂಚಾರಪಥಕ್ಕೆ ಅಡ್ಡಲಾಗಿ ನಿಂತು ಸಂಹಾರಾಸ್ತ್ರವನ್ನು ಹಿಡಿದನು. ಶನಿಮಹಾರಾಯನು ಈ ಚಕ್ರವರ್ತಿಯ ಪರಾಕ್ರಮಕ್ಕೆ ಮೆಚ್ಚಿ ತನ್ನ ಸಂಚಾರಪಥವನ್ನು ಬದಲಾಯಿಸುವದಾಗಿ ತಿಳಿಸಿದನು. ಕೂಡಲೆ ರಾಜನು ಧನುರ್ಬಾಣಗಳನ್ನು ಇಳಿಸಿ ಪರಮಭಕ್ತಿಯಿಂದ ಶನಿಯನ್ನು ಸ್ತುತಿಸಿದನು. "ಶನಿಮಹಾರಾಜನು ಪರಮ ತಪಸ್ವಿಯು. ಮಹಾಜ್ಞಾನಿಯು. ಆದ್ದರಿಂದಲೇ ಬಡಕಲಶರೀರವುಳ್ಳವನು. ಜ್ಞಾನಚಕ್ಷುವುಳ್ಳವನು. ಯಾವಾಗಲೂ ಕೆಳಗೆ ನೋಡುವವನು. (ಇದು ರಾಜರುಗಳು, ಮಹಾತಪಸ್ವಿಗಳಾದ ಪೀಠಾಧಿಪತಿಗಳಿಗೂ ಅನ್ವಯಿಸುವದು. ಏಕೆಂದರೆ ಯಾರಮೇಲೂ ಅಂಥವರ ದೃಷ್ಟಿ ಬೀಳಬಾರದು). ಶನಿಯೂ ಅಂಥ ಮಹಾಮಹಿಮನೇ ಆಗಿರುವನು. ಕಶ್ಯಪರ ಮಗನಾದ ಸೂರ್ಯನ ಪುತ್ರನೇ ಈತನು. ಬ್ರಹ್ಮನಿಷ್ಠರಾದ ಪಿಪ್ಪಲಾದಋಷಿಗಳಿಂದ ಸಂಸ್ತುತನಾದವನು"– ಇತ್ಯಾದಿ ರೂಪವಾದ ದಶರಥನ ಸ್ತೋತ್ರವು ಶನಿಮಹಾತ್ಮನನ್ನು ಸಂತೋಷಗೊಳಿಸಿತು. ಆದ್ದರಿಂದ ಈಗಲೂ ಶನಿವ್ರತಮಾಡಿದವರು ದಶರಥಕೃತಶನಿಸ್ತೋತ್ರವನ್ನು ಪಠಿಸಿ ವ್ರತವನ್ನು ಪೂರೈಸಬೇಕು–ಎಂದು ತಿಳಿಸಿದೆ.

---

# ಪ್ರಕೃತಿನಿಯಮ

(ಪತ್ರಿಕಾಪಾಠಕ)

ಇತ್ತೀಚೆಗೆ ಬೊಂಬಾಯಿನಗರದಲ್ಲಿ ಬಿದ್ದ ಹೆಚ್ಚಿನ ಮಳೆಯ ಪರಿಣಾಮವಾಗಿ ಜನಜೀವನವು ಅಸ್ತವ್ಯಸ್ತವಾಯಿತೆಂದು ಪತ್ರಿಕೆಗಳಲ್ಲಿ ವರದಿಯು ಬಂದಿತ್ತು. ಒಂದು ಕನ್ನಡಪತ್ರಿಕೆಯಲ್ಲಿದ್ದ ವಿಶೇಷವೇನೆಂದರೆ : "ಮಳೆಯ ಪರಿಣಾಮವಾಗಿ ಒಳಚರಂಡಿವ್ಯವಸ್ಥೆಗಳು ಕೆಟ್ಟುಹೋಗಿರುವದರಿಂದ ಉತ್ತರ ಮುಂಬೈನಲ್ಲಿ ಸ್ನಾನ ಗೃಹ-ಶೌಚಗೃಹಗಳನ್ನು ಉಪಯೋಗಿಸಬಾರದೆಂದು ಜನರಿಗೆ ಸೂಚನೆಯನ್ನು ನೀಡಲಾಗಿದೆ"- ಎಂಬ ಈ ಸುದ್ದಿವಿಶೇಷವು ನನಗೆ ನಗುಬರುವಂತೆ ಮಾಡಿತು. ಆಧುನಿಕ ನಾಗರಿಕತೆ, ಹಾಗೂ ಪಟ್ಟಣಗಳ ಬೆಳವಣಿಗೆಯ ಹೆಸರಿನಲ್ಲಿ ಜನರ ಪರಾಧೀನತೆಯು ಪರಾಕಾಷ್ಠೆಯನ್ನು ಮುಟ್ಟಿ ಅತ್ಯಗತ್ಯವಾದ ಆವಶ್ಯಕತೆಗಳ ವಿಷಯಕ್ಕೂ ತನ್ನ ಪ್ರಭಾವವನ್ನು ಬೀರಿ ಮತ್ತಷ್ಟು ಬದ್ಧರನ್ನಾಗಿ ಮಾಡಿರುವದರ ಬಗ್ಗೆ ಬಹಳ ಕನಿಕರವೇ ಉಂಟಾಯಿತು. ಈಗ್ಗೆ ಸ್ವಾತಂತ್ರವು ಅಳುವ ವಿಷಯದಲ್ಲಿ ಮಾತ್ರ ಇದೆ- ಎಂದು ವಿಷಾದದಿಂದ ಹೇಳಬೇಕಾಗಿದೆ. ಇದಕ್ಕೆ ಕಾರಣವನ್ನು ಹುಡುಕುವದು, ಒಬ್ಬರನ್ನೊಬ್ಬರು ದೂರುವದು- ಎಂದಿಗೂ ಪರಿಹಾರಕ್ರಮವಾಗಲಾರದು.

ಪ್ರಾಚೀನಋಷಿಗಳು ಎಂದಿಗೂ ಇಂಥ ಸಂಕಟಗಳಿಗೆ ಸಿಲುಕಿರಲಿಲ್ಲ. ಅವರ ನಾಗರಿಕತೆಯು ಅಂತರಂಗಜೀವನದ ಔನ್ನತ್ಯದ ಕುರುಹಾಗಿತ್ತು. ಬಹಿರಂಗಜೀವನದಲ್ಲಿ ನಮ್ಮ ಈಗಿನ ವೈಜ್ಞಾನಿಕಯುಗದವರ ದೃಷ್ಟಿಯಿಂದ ಅವರು 'ಕಾಡುಮನುಷ್ಯ' ರೆನಿಸಿರಬಹುದು. ಆದರೆ ಈಗ ನಾವು ಸಿಲುಕಿಕೊಂಡಿರುವ ಸಂಸಾರವೆಂಬ ಕಾಡಿನಲ್ಲಿ ದಿಕ್ಕುಗಾಣದೆ, ಅನ್ನ, ಬಟ್ಟೆ ಉದ್ಯೋಗಗಳಾಗಲೀ ಮಾನವಜೀವನದ ಗುರಿಗಳಾದ ಧರ್ಮಾರ್ಥಕಾಮಮೋಕ್ಷಗಳಾಗಲಿ- ಒಂದೂ ದೊರಕದೆ ಕಾಡುಪಾಲಾಗಿರುವದಕ್ಕಿಂತಲೂ ಅವರ ಐಹಿಕಜೀವನವೇ ಅತ್ಯುತ್ತಮವಾಗಿತ್ತೆಂದು ಹೇಳಬೇಕಾಗಿದೆ. ಏಕೆಂದರೆ ಅವರು ಸಾಕಷ್ಟು ಸ್ವತಂತ್ರರಾಗಿದ್ದರು. ಈಗ ದುರಾಶೆಯ ಫಲವಾಗಿ ಮಾನವನು ಪ್ರಕೃತಿಯನ್ನೇ ತನಗೆ ಎದುರುಹಾಕಿಕೊಂಡು ಅದರೊಡನೆ ಸ್ಪರ್ಧೆ ಮಾಡುತ್ತಿದ್ದರೆ ಎಂದಿಗಾದರೂ ಜಯಶೀಲನಾದಾನೆ ? ಪ್ರಕೃತಿಯನ್ನು ನಿಯಂತ್ರಿಸುವ ಭಗವಂತನನ್ನು ಮರೆತು ತನ್ನ ಅಲ್ಪಬಲವೀರ್ಯಗಳಿಂದ ಅದರೊಡನೆ ಸೆಣಸಾಡುತ್ತಿರುವ ಆಧುನಿಕಮಾನವನು ಮೂರ್ಖನೆಂದೇ ಋಷಿಗಳ ಅಭಿಮತವಾಗಿದೆ. ಆ ಮಹನೀಯರಿಗೆ ಪ್ರಕೃತಿನಿಯಮಗಳ ಅರಿವು ಬಹು ಚೆನ್ನಾಗಿ ತಿಳಿದಿದ್ದು ಆತ್ಮಬಲದಿಂದಲೇ ಅದನ್ನು ತಮ್ಮ ವಶಮಾಡಿಕೊಳ್ಳುವ ವಿದ್ಯೆಯು ಕರಗತವಾಗಿತ್ತು. ಅಂಥ ಸಜ್ಜನರ ಪ್ರಭುತ್ವವೂ ಮಾರ್ಗದರ್ಶನವೂ ಇದ್ದಾಗ ಭಾರತವು ಸಮೃದ್ಧವಾಗಿಯೂ ಜಗತ್ತಿನಲ್ಲೇ ಪುಣ್ಯಭೂಮಿಯಾಗಿಯೂ ಬಾಳುತ್ತಿತ್ತು. ದೇವತೆಗಳು ಕೂಡ ಭಾರತದಲ್ಲಿ ಹುಟ್ಟಲು ಬಯಸಿ ಅವತಾರಗಳನ್ನು ಮಾಡಿದರು. ಈಗ ಅಂಥ ಪವಿತ್ರಭಾರತವು ಎಲ್ಲಿ ಕಣ್ಮರೆಯಾಯಿತು ? ಏಕೆ ? ಈಗಲಾದರೂ ನಾವು ಕಣ್ಣು ತೆರೆಯಬೇಡವೆ ?

—— ——

# ಜಿಜ್ಞಾಸುಗಳ ಪ್ರಶ್ನೆಗಳಿಗೆ ಉತ್ತರಗಳು

(ಸಂಪಾದಕರು)

೧. **ಪ್ರಶ್ನೆ :** ಮೃತ್ಯುಭಯದಿಂದ ಹೆದರುತ್ತಿರುವವನಿಗೆ 'ನೀನೇ ಆತ್ಮ; ನೀನು ಹುಟ್ಟಿಯೂ ಇಲ್ಲ; ಆದ್ದರಿಂದ ನಿನಗೆ ಸಾವೂ ಇಲ್ಲ' ಎಂದು ಹೇಳುವದು ಒಂದು ರೀತಿಯ ಉಪಶಮನ ಔಷಧಿ (Sedative Mixture) ಎಂದು ನನ್ನ ಅಭಿಪ್ರಾಯ. ಈ ಔಷಧಿಯು ಫಲಕಾರಿಯಾಯಿತೆ ? ಇಲ್ಲವೆ ? ಎಂಬುದು ಅವನನ್ನು ಬಿಟ್ಟು ಬೇರೆಯವರಿಗೆ ತಿಳಿಯುವದಿಲ್ಲ. ಏಕೆಂದರೆ ಆ ವ್ಯಕ್ತಿ ಮೃತನಾದರೆ ನಮಗೆ ಅದರ ಬಗ್ಗೆ ಹೇಳುವ ಯಾವ ಸಾಕ್ಷಿಯೂ ಇರುವದಿಲ್ಲ. ಸತ್ತವನು ಎದ್ದು ಬಂದು ಹೇಳಲಾರ. ಹೀಗೆ ಸಾಕ್ಷಿಯಿಲ್ಲದ ವೇದಾಂತಜ್ಞಾನವು ಹುಸಿಯೆಂದೇ ಅಜ್ಞರು ಭಾವಿಸುವಂತಿದೆ. ಅಧ್ಯಾತ್ಮವಿದ್ಯೆಯು ಸಮಷ್ಟಿಕಲ್ಯಾಣವನ್ನು ಬಯಸುವ ವಿದ್ಯೆಯಾಗಿರುವದರಿಂದ ಅಮೃತತ್ವವನ್ನು ಅನುಭವದಿಂದ ಮನಗಂಡವರ ಸಾಕ್ಷಿಯು ದೊರಕುವವರೆಗೂ ಜನರು ಇದನ್ನು ಆದರಿಸಲಾರರು. ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ?

**ಉತ್ತರ :** ನೀವು ಭಾವಿಸಿರುವಂತೆ ಪ್ರಾರಂಭದಲ್ಲಿ ಸಂಸಾರವೆಂಬ ರೋಗಕ್ಕೆ ವೇದಾಂತವು ಉಪಶಮನಔಷಧಿಯೇ ಹೌದು. ಆದರೆ ಜನನ-ಮರಣಗಳ ನಿಜವನ್ನು ವಿಚಾರಮಾಡಲು ಹೊರಟಾಗ ವಿಚಾರಕನೂ ಜನನಮರಣಗಳುಳ್ಳವನೇ-ಎಂತ ಮೊದಲೇ ಇಟ್ಟುಕೊಂಡುಬಿಟ್ಟರೆ ತೀರ್ಮಾನವನ್ನು ಹೇಳಲಾಗುವದಿಲ್ಲ. ಆದ್ದರಿಂದ ಜನನಮರಣಗಳಿಗಿಂತ ಬೇರೆಯಾದ ಆತ್ಮನು ವಿಚಾರಕನೆಂದು ಅಂಗೀಕರಿಸಿ ಮುಂದುವರೆಯಬೇಕು. ದೇಹವು ಹುಟ್ಟಿದಾಗ ಆತ್ಮನು ಹುಟ್ಟಿದನು-ಎಂದೂ, ಅದು ಬಿದ್ದುಹೋದಾಗ ಸತ್ತನು-ಎಂದೂ ಈಗ ವ್ಯವಹಾರವಿದೆ. ಇದೇ ಜಾಗ್ರದ್ವ್ಯವಹಾರದಲ್ಲಿಯೇ ದೇಹವನ್ನು ಬಿಟ್ಟ ಆತ್ಮನಿಗೂ ಶ್ರಾದ್ಧಾದಿಗಳನ್ನು ಆಚರಿಸುವ ಪದ್ಧತಿಯಿದೆ. ಆ ಸಂದರ್ಭದಲ್ಲಿ ಶ್ರಾದ್ಧಮಾಡುವವರ ಭಾವನೆಯಲ್ಲಿ ದೇಹಕ್ಕಿಂತ ಬೇರೆಯಾದ ಪರಲೋಕಗತನಾದ ಆತ್ಮನು ಇದ್ದಾನೆಂದೇ ನಂಬಿಕೆಯಿರುತ್ತದೆ. ಇದು ಶ್ರುತಿಸಮ್ಮತವೂ ಆಗಿದೆ. ಹೀಗೆ ವಿಚಾರಮಾಡಿದಾಗ ಜನನಮರಣಗಳು ಆತ್ಮನಲ್ಲಿ ಔಪಾಧಿಕವಾಗಿ ತೋರುವ ವಿಕಾರಗಳಾಗಿದ್ದು ನಿಜವಾಗಿ ಅವು ದೇಹಕ್ಕೆ ಮಾತ್ರ ಸಂಬಂಧಿಸಿವೆ-ಎಂದು ಗೊತ್ತಾಗುವದು. ವೇದಾಂತಶಾಸ್ತ್ರವಾದರೋ, ಇನ್ನೂ ಮುಂದುವರೆದು ದೇಹಧರ್ಮಗಳಾದ ಜನನಮರಣಗಳು, ಪ್ರಾಣಧರ್ಮಗಳಾದ ಹಸಿವು ಬಾಯಾರಿಕೆಗಳು, ಮನೋಧರ್ಮಗಳಾದ ಶೋಕಮೋಹಗಳು-ಇವು ಯಾವವೂ ಆತ್ಮನಲ್ಲಿಲ್ಲವೆಂದೂ ಅವನು ನಿತ್ಯಶುದ್ಧಬುದ್ಧಮುಕ್ತಸ್ವಭಾವನೆಂದೂ ಅರಿವನ್ನು ಉಂಟುಮಾಡುತ್ತದೆ. ಈ ಅರಿವು ವೈಯಕ್ತಿಕವೇ ಹೊರತು ಸಮಷ್ಟಿಯಲ್ಲ. ಯಾರು ಯಾರು ಅಸಂಸಾರಿಯಾದ ಆತ್ಮನನ್ನು ಅರಿತುಕೊಳ್ಳುವರೋ ಅವರವರು ಮುಕ್ತರಾಗುವರೆಂದೇ ಉಪನಿಷತ್ತಿನಲ್ಲಿ ತಿಳಿಸಿದೆ.

ಈಗ ಸಾಕ್ಷಿಯ ವಿಚಾರ. ವೇದಾಂತಜ್ಞಾನವು ವಿಚಾರಕನ ಸ್ವರೂಪವೇ ನೆಂಬುದನ್ನು ಕುರಿತದ್ದೇ ಹೊರತು ವಿಚಾರಕನು ತನಗೆ ವಿಷಯವಾಗಿ (object) ಮಾಡಿಕೊಂಡು ನಿರ್ಣಯಿಸುವ ವಸ್ತುವಿಗೆ ಸೇರಿದ್ದಲ್ಲ. ಈ ಅಭಿಪ್ರಾಯದಂತೆ ನಮ್ಮೊಳಗೇ ಇದ್ದುಕೊಂಡು "ನಾನು" ಎಂದೇ ವ್ಯವಹರಿಸಲ್ಪಡುವ ಇಂದ್ರಿಯ ಮನೋಬುದ್ಧಿ-ಅಹಂಕಾರಗಳು ಕೂಡ ನಾನಲ್ಲ. ಅವೆಲ್ಲವೂ ಅನಾತ್ಮಪಕ್ಷಕ್ಕೇ ಸೇರುವವು. ಅವುಗಳ ತೀರ್ಮಾನವೂ ಅನಾತ್ಮವನ್ನು ಕುರಿತೇ ಆಗಿರಬೇಕಾದದ್ದು ನ್ಯಾಯ. ಆದ್ದರಿಂದ "ಆತ್ಮವಿಚಾರ"ವನ್ನು ಮಾಡಿ "ಆತ್ಮಜ್ಞಾನ"ವನ್ನು ಸಂಪಾದಿಸಿಕೊಳ್ಳಲಿರುವವನು ತನ್ನೊಳಗಿನ ಪ್ರತ್ಯಗಾತ್ಮನನ್ನು ಗುರುತಿಸಿದಲ್ಲದೆ ವಿಧಿಯಿಲ್ಲ. ಆ ಪ್ರತ್ಯಗಾತ್ಮನೇ ಸಾಕ್ಷಿಯು. ಅವನು ಸ್ವಯಂಸಿದ್ಧನು. ಅವನೇ ಉಳಿದವುಗಳನ್ನೂ ಅರಿಯುವವನಾದ್ದರಿಂದ ಅವನ ಅರಿವು ಸ್ವರೂಪಭೂತವಾದದ್ದು. ಆ ಅನುಭವವು ಸಾಧಕನಿಗೆ ದೊರೆತಾಗಲೇ ಅವನು ಸಿದ್ಧನೆನಿಸಿ ಜನನಮರಣ ಭಯಗಳನ್ನು ನೀಗಿಕೊಳ್ಳುವನು. ಅಷ್ಟೇ ಅಲ್ಲ. ಜನನ-ಮರಣ, ಬಂಧ-ಮೋಕ್ಷ-ಎಂಬ ವ್ಯವಹಾರವೇ ಆಗ ಇಲ್ಲವಾಗಿ ಬಿಡುವದು.

ಇನ್ನು ಜಾಗ್ರದವಸ್ಥೆಯ ವಿಚಾರ. ನಾವು ಈಗ ಎಷ್ಟೇ ವಿಚಾರಮಾಡಿದರೂ ಜಾಗ್ರದವಸ್ಥಾಭಿಮಾನಿಗಳಾಗಿರುವವರೆಗೆ ಬಂಧಮೋಕ್ಷಗಳ ಸಮಸ್ಯೆಯು ಬಗೆ ಹರಿಯಲಾರದು. ಏಕೆಂದರೆ ನಮ್ಮ ತೀರ್ಮಾನಗಳು ಅವಸ್ಥಾಬದ್ಧವಾಗಿಯೇ ಆಗುವವು. ಮೋಕ್ಷವಾದರೊ, ಅವಸ್ಥಾತೀತವಾದ ಸ್ವರೂಪವು. ಆದ್ದರಿಂದ ಅವಸ್ಥೆ ಗಳನ್ನು ಆತ್ಮನಿಗೆ ದೃಶ್ಯವಾಗಿ ಭಾವಿಸಿ ವಿಚಾರಮಾಡಿದರೆ ಮಾತ್ರ ಅಸಂಸಾರಿ ಸ್ವರೂಪದ ಅನುಭವವಾಗುವದು. ಅವಸ್ಥಾತ್ರಯಾತೀತನಾದ ಆತ್ಮನಿಗೆ ತುರೀಯ ನೆಂದೇ ಹೆಸರು. ಈ ತುರೀಯಾನುಭವವು ಪ್ರಪಂಚೋಪಶಮ, ಶಾಂತ, ಶಿವ, ಅದ್ವೈತವೆಂದು ಶ್ರುತಿಯು ಸಾರುತ್ತಿದೆ. ಆದ್ದರಿಂದ ಅವಸ್ಥಾತ್ರಯಮಹಾತರ್ಕ ದಿಂದ ಆತ್ಮಶೋಧನೆಮಾಡಿಕೊಂಡು ಅಂತರ್ಮುಖನಾಗುವವನಿಗೆ ಮಾತ್ರ ವೇದಾಂತ ಪ್ರತಿಪಾದ್ಯವಾದ ಮುಕ್ತಿಯು ದೊರಕುವದು. ಇದು ಕೇವಲ ಕಲ್ಪನೆಯಲ್ಲ. ಕಲ್ಪನೆಗೆ ಆಶ್ರಯನಾದ "ಕಲ್ಪಕ" ನ ಸ್ವರೂಪಭೂತವಾದದ್ದಾಗಿದೆ. ಇನ್ನೂ ಹೆಚ್ಚಿನ ವಿಚಾರಗಳನ್ನು ನೀವು ಉಪನಿಷದ್ಭಾಷ್ಯಗಳ ಅಧ್ಯಯನದಿಂದಲೇ ಸಂಪಾದಿಸಿಕೊಳ್ಳಬೇಕು.

೨. **ಪ್ರಶ್ನೆ :**-ನಮ್ಮ ಜೀವನದಲ್ಲಿ ಬಾಲ್ಯದಿಂದ ಈವರೆಗೆ ಎಷ್ಟೋ ವ್ಯಕ್ತಿಗಳು ಜೊತೆಗಿದ್ದು ಕಣ್ಮರೆಯಾಗಿರುತ್ತಾರೆ. ಅವರಲ್ಲಿ ಕೆಲವರು ಬಂಧುಗಳೂ ಸ್ನೇಹಿತರೂ ಇರುತ್ತಾರೆ. ಕರ್ಮಕಾಂಡದ ಉಪದೇಶದಂತೆ ಮೃತಜ್ಞಾತಿಬಂಧುಗಳಿಗೆ "ತರ್ಪಣ" ಕೊಡುವ ಪದ್ಧತಿಯಿದೆ. ಆಗ್ಗೆ ಹಿರಿಯರು ಹಾಗೂ ಅಗಲಿಹೋದವರ ನೆನಪು ಬರುತ್ತದೆ. ಆದರೆ ಎಷ್ಟೋ ಹಿರಿಯರು ನಾವು ಚಿಕ್ಕವರಾಗಿದ್ದಾಗ ನಮ್ಮಲ್ಲಿ ಪ್ರೀತಿ ವಿಶ್ವಾಸಗಳನ್ನಿಡದೆ ತಿರಸ್ಕರಿಸಿರುತ್ತಾರೆ. ಕೆಲವು ಸ್ನೇಹಿತರು- ಬೇರೆಜಾತಿಯವ ರಾಗಿದ್ದು ಬಂಧುವರ್ಗದವರಲ್ಲದವರೂ ಸಹ- ಉಪಕಾರಮಾಡಿರುತ್ತಾರೆ. ಅಂಥವರ

ನೆನಪೂ ನಮಗೆ ಆಗಾಗ್ಗೆ ಬರುತ್ತದೆ. ಆದರೆ ಕರ್ಮಕಾಂಡದ ಆದೇಶದಂತೆ ಅಂಥವರಿಗೆ "ತರ್ಪಣ" ಕೊಡುವಂತಿಲ್ಲ. ಇದು ಸರಿಯೆ ? ನಮಗೆ ಉಪಕಾರಮಾಡಿದ್ದು ಪ್ರೀತಿಸಿದವರೆಲ್ಲರಿಗೂ ತರ್ಪಣವನ್ನು ಕೊಡಬಾರದೆ ? ದ್ವೇಷಿಸಿದ ದಾಯಾದಿಗಳನ್ನು ಕೈಬಿಡಬಾರದೆ ? ನಿಮ್ಮ ಅಭಿಪ್ರಾಯವೇನು ?

**ಉತ್ತರ :** ನಿಮ್ಮ ಪ್ರಶ್ನೆ ಬಹಳ ಸುಂದರವಾಗಿದೆ. ಋಷಿಮುನಿಗಳ ಅಭಿಪ್ರಾಯದಂತೆ ದಾಯಾದಿ–ಹಾಗೂ–ಬಂಧುವೆನಿಸಿ ರಕ್ತಸಂಬಂಧಹೊಂದಿದ್ದವನು ಬದುಕಿದ್ದಾಗ ನಮ್ಮನ್ನು ಕೈಬಿಟ್ಟಿದ್ದರೂ ದ್ವೇಷಮಾಡಿದ್ದರೂ ಚಿಂತೆಯಿಲ್ಲ. ಸತ್ತ ಮೇಲೂ ಆತನು ದಾಯಾದಿಯೆಂದೇ ವ್ಯವಹರಿಸಲ್ಪಡುತ್ತಾನೆ. ಪ್ರಹ್ಲಾದನಿಗೆ ಮಿತಿಮೀರಿದ ಹಿಂಸೆಯನ್ನು ಕೊಟ್ಟ ತಂದೆಯು ಮೃತನಾದ ಮೇಲೆ ತಂದೆಯಲ್ಲದೆ ಹೋದನೆ ? ಪ್ರಹ್ಲಾದನು ಅವನ ಬಗ್ಗೆ ಹೇಗೆ ನಡೆದುಕೊಂಡನು ? ಎಂಬಿದನ್ನು ವಿಚಾರಮಾಡಿರಿ. "ಮರಣಾಂತಾನಿ ವೈರಾಣಿ" ಎಂಬ ರಾಮಾಯಣವಾಕ್ಯದಂತೆ ದೇಹವಿಯೋಗಾನಂತರ ರಾಗದ್ವೇಷಗಳ ಪ್ರಶ್ನೆಯು ಉದ್ಭವಿಸುವದಿಲ್ಲ. ಅದನ್ನು ಅಲ್ಲಿಗೇ ಕೈಬಿಡಬೇಕು. ದಾಯಾದಿಸಂಬಂಧವನ್ನೇ ಎತ್ತಿಹಿಡಿಯಬೇಕು. ಯಾವ ದಾಯಾದಿ ಅಥವಾ ಬಂಧುವೇ ಆಗಲಿ–ಹೇಗೆ ನೀವು ನಿದ್ರೆಯಲ್ಲಿದ್ದಾಗ ನಿಮಗೆ ಯಾವ ಶತ್ರುಮಿತ್ರರೂ ಇರುವದಿಲ್ಲವೋ ಹಾಗೆ- ಕಣ್ಮರೆಯಾದಮೇಲೆ ಅವನು ಶತ್ರುವೂ ಅಲ್ಲ ! ಮಿತ್ರನೂ ಅಲ್ಲ. ಅವನು ನಿಮ್ಮ ದೇಹವು ಈ ಪ್ರಪಂಚದಲ್ಲಿರುವ ವರೆಗೂ ನಿಮ್ಮ ಸಂಬಂಧಿಕನೆಂದೇ ಕರೆಯಲ್ಪಡುವನು. ಆದ್ದರಿಂದ ನೀವು ಇಂಥ ಸಂದರ್ಭಗಳಲ್ಲಿ ಆಯಾ ವ್ಯಕ್ತಿಗಳ ಜೀವಿತಕಾಲದ ಕಹಿನೆನಪುಗಳನ್ನು ಮರೆತು ಕೇವಲ ಹಿರಿಯರು ಹಾಗೂ ಜ್ಞಾತಿಗಳೆಂಬ ಪೂಜ್ಯಭಾವನೆಯಿಂದಲೇ ತರ್ಪಣಾದಿಗಳನ್ನು ನೆರವೇರಿಸಬೇಕು. ಶ್ರದ್ಧೆಯುಳ್ಳವರಿಗೆ ಮೃತರಾದ ಹಿರಿಯರೆಲ್ಲ ದೇವತಾಸ್ವರೂಪರೇ ಆಗಿರುತ್ತಾರೆ.

ಇನ್ನು ಮಿತ್ರರು ಹಾಗೂ ಅಂತರ್ಜಾತೀಯರಾದ ಉಪಕಾರಿಗಳ ವಿಚಾರ. ವಿಶಾಲಹೃದಯರಾದ ಋಷಿಗಳು ಅಂಥವರಿಗೂ 'ತರ್ಪಣ'ವನ್ನು ಕೊಡಬೇಕೆಂದೇ ವಿಧಿಸಿರುತ್ತಾರೆ. ತರ್ಪಣದ ಕಡೆಯಲ್ಲಿ ಸ್ವಾಮಿನಂ, ಸಖಾಯಂ- ಎಂದು ಯಜಮಾನ, ಸ್ನೇಹಿತ–ಮುಂತಾಗಿ ಎಲ್ಲರಿಗೂ (ನಿಮ್ಮ ಇಷ್ಟಾನುಸಾರ) ತರ್ಪಣವನ್ನು ಕೊಡಬಹುದು. ಇನ್ನೂ ಮುಂದುವರೆದರೆ–ಋಷಿಗಳು ತಿಳಿಸಿರುವ ಈ ಪದ್ಯವನ್ನು ಅನುಸಂಧಾನಮಾಡಿರಿ : "ಆ ಬ್ರಹ್ಮಸ್ತಂಬಪರ್ಯಂತಂ ದೇವರ್ಷಿಪಿತೃಮಾನವಾಃ । ತೃಪ್ಯಂತು ಪಿತರಃ ಸರ್ವೇ"....ಇತ್ಯಾದಿ ಶ್ಲೋಕದಲ್ಲಿ "ಪಿತೃ" ಶಬ್ದದಿಂದ ನಮಗೆ ಉಪಕಾರಮಾಡಿರುವ ದೇವತೆಗಳು, ಋಷಿಗಳು, ಮನುಷ್ಯರು, ಪಶುಪಕ್ಷಿಗಳಾದಿಯಾಗಿ ಎಲ್ಲರನ್ನೂ ಪರಾಮರ್ಶಿಸಿದೆ. ಇದರ ಆಧಾರದಿಂದಲೇ ಜಟಾಯುವಿಗೆ ರಾಮನು ಅಂತ್ಯಸಂಸ್ಕಾರಮಾಡಿದನು. ನೀವು ವಿಶಾಲಹೃದಯರಾಗಿ ಸರ್ವಭೂತಗಳಿಗೂ ತೃಪ್ತಿಯನ್ನು ಬಯಸುವಿರಾದರೆ ಬೇಡವೆನ್ನುವವರಾರು? ಸನಾತನಧರ್ಮವು ವಿಶ್ವವ್ಯಾಪಕಧರ್ಮವಲ್ಲವೆ ?

---

# ಗ್ರಂಥಪರಿಚಯ

೧. **ಕಾವ್ಯಮಂಜರೀ** (ಸಂಸ್ಕೃತ) ಬರೆದವರು : ಮತ್ತು ಪ್ರಕಾಶಕರು : ಪ್ರೊ. ಎಂ. ರಾಮಕೃಷ್ಣಭಟ್, ಎಂ.ಎ., 'ಬೆನಕ' ರಥಬೀದಿ, ಪೋಸ್ಟ್ ವಿಟ್ಲ. (ಮಂಗಳೂರು ಮಾರ್ಗ) ಪುಟಗಳು : ಕ್ರೌನ್ ೩೧೦ ; ಬೆಲೆ : ರೂ. 25.

ಸಂಸ್ಕೃತ ಹಾಗೂ ಇಂಗ್ಲಿಷುಭಾಷೆಗಳಲ್ಲಿ ಸವ್ಯಸಾಚಿಯಂತೆ ಸಮಾನಪಾಂಡಿತ್ಯವನ್ನೂ ಪ್ರೌಢಿಮೆಯನ್ನೂ ಪಡೆದಿರುವ ದೆಹಲಿ ವಿಶ್ವವಿದ್ಯಾನಿಲಯದ ನಿವೃತ್ತ ಸಂಸ್ಕೃತಪ್ರೊಫೆಸರಾದ ಲೇಖಕರು ಗೀರ್ವಾಣಭಾಷೆಯಲ್ಲಿ ತಮ್ಮದೇ ಆದ ಭವ್ಯ-ವಿಶಿಷ್ಟಶೈಲಿಯಿಂದ ರಚಿಸಿರುವ ಕಾವ್ಯ ಗ್ರಂಥವಿದು. ಇದರಲ್ಲಿ ಒಟ್ಟು ಸುಮಾರು ಎರಡುಸಾವಿರ ಪದ್ಯಗಳಿವೆ. ಗ್ರಂಥವನ್ನು ಎರಡು ಸ್ತಬಕಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಸ್ತಬಕದಲ್ಲಿ ಆರು ಪುಷ್ಪಗಳೆಂಬ ಉಪವಿಭಾಗ ಗಳಿವೆ. ಎರಡನೆಯ ಸ್ತಬಕದಲ್ಲಿ ಮೂರು ಶತಕಗಳು ಇವೆ. ಪದ್ಯಗಳು ಬೇರೆಬೇರೆಯ ಛಂದಸ್ಸುಗಳಲ್ಲಿ ರಚಿತವಾಗಿದ್ದು ದೇವತಾಸ್ತೋತ್ರಗಳು, ಸುಪ್ರಭಾತಗಳು, ಗುರುಮಹಿಮಾದಿ ಗಳ ವರ್ಣನೆಗಳು, ಸಾಮಾಜಿಕ, ಲೌಕಿಕವಿಷಯಗಳು, ಅಭಿನಂದನೆ- ಆಶಂಸನೆಗಳು, ರಾಷ್ಟ್ರ ಭಕ್ತಿಗೀತೆಗಳು, ನೀತಿ, ಧರ್ಮಬೋಧಕ ಉಪದೇಶಗಳು- ಮುಂತಾಗಿ ನಾನಾರೀತಿಯ ವಿಷಯ ವೈವಿಧ್ಯಗಳಿಂದ ಕೂಡಿವೆ. ಸಂಸ್ಕೃತಭಾಷೆಯಲ್ಲಿ ಈಗಲೂ ಇಂಥ ಕೃತಿಗಳು ಪ್ರಕಟವಾಗು ತ್ತಿರುವದೂ ಕವಿಜನರೂ ಸಹೃದಯರೂ ಸಂಸ್ಕೃತಿಪ್ರಿಯರೂ ಕಂಡುಬರುತ್ತಿರುವದೂ ಸಹ ಸಂಸ್ಕೃತವು 'ಅಮರಭಾಷೆ'ಯೆಂಬುದನ್ನು ಎತ್ತಿ ತೋರಿಸುತ್ತಿದೆ. ಸಂಸ್ಕೃತವನ್ನು ಬಲ್ಲ ವಿದ್ವಜ್ಜನರು ಹೇಗೆ ಭಾರತಸಂಸ್ಕೃತಿಯ ಪ್ರತಿನಿಧಿಗಳಾಗಿರುತ್ತಾರೆ- ಎಂಬುದಕ್ಕೆ ಈ ಲೇಖಕರು ಜೀವಂತ ಉದಾಹರಣೆಯಾಗಿದ್ದಾರೆ.

ಶ್ರೀ॥ ರಾಮಕೃಷ್ಣಭಟ್ಟರ ಕೆಲವು ಕೃತಿರತ್ನಗಳಲ್ಲಿ (೧) ಶ್ರೀಗುರುಚರಿತಮ್ (೨) ವಿಶ್ವಜನೀನಾ ಗೀತಾ (೩) ಶ್ರೀಸೋಮನಾಥಸಮುಜ್ಯಾಸ್ತನಃ- ಎಂಬೀ ಕೃತಿಗಳೂ ನಮ್ಮ ಕೈ ಸೇರಿರುತ್ತವೆ. ಶ್ರೀಯುತರು ದಿವಂಗತ ಮಹಾಮಹೋಪಾಧ್ಯಾಯ ಪ್ರೊ. ಕುಪ್ಪಸ್ವಾಮಿ ಶಾಸ್ತ್ರಿಗಳವರ ಶಿಷ್ಯವೃಂದದವರಲ್ಲಿ ಗಣ್ಯರಾಗಿರುತ್ತಾರೆ. ತಮ್ಮ ಗುರುಭಕ್ತಿಯ ದ್ಯೋತಕವಾಗಿ ದಿವಂಗತರ ಜೀವನಚರಿತ್ರೆಯನ್ನು ನಾಲ್ಕು ಸರ್ಗಗಳ ರೂಪವಾದ ಕಾವ್ಯವಾಗಿ ಬರೆದಿರುವ ಕೃತಿಯೇ 'ಗುರುಚರಿತಮ್'- ಎಂಬ ಗ್ರಂಥವಾಗಿದೆ. ಶ್ರೀಯುತರ ಕಾವ್ಯಮಾಧುರಿಯನ್ನೂ ರಸಭಾವಗಳ ಅನುಭವವನ್ನೂ ಪಡೆಯಬೇಕಾದರೆ ಗ್ರಂಥವನ್ನೇ ಪೂರ್ಣವಾಗಿ ಪಠಿಸಬೇಕು. ನಮಗೆ ಮೆಚ್ಚಾದ ಎರಡು ಪದ್ಯಗಳನ್ನು ಮಾತ್ರ ವಾಚಕರ ಅವಗಾಹನೆಗೆ ತರಲಿಚ್ಛಿಸುವೆವು. (೧) 'ಗಾಯತ್ರೀ ಗೀಯಮಾನಾ ದ್ವಿಜಮಿಹ ಸತತಂ ತ್ರಾಯತೇ ದುರ್ಗತೇಃ ಸಾ । ಸಾವಿತ್ರೀ ಸ್ತೂಯಮಾನಾ ಜಗತಿ ಚ ನಿಖಿಲಾಭೀಷ್ಟಸಿದ್ಧಿಂ ಪ್ರಸೂತೇ ॥ ಛಂದೋಮಾತಾ ಪ್ರದತ್ತೇ ಸರಸವಚನವಿನ್ಯಾಸಶಕ್ತಿಂ ಸರಸ್ವತ್ಯೇಷಾ ಯೋಷಾ ಪ್ರದೋಷಪ್ರಚಯಮಪಮಮೇತ್ ಸದ್ವಟೋರ್ಹಂಸಶುಭ್ರಾ' ॥ (ಇದು ನೂತನ ವಟುವಿಗೆ ಆಶೀರ್ವಾದರೂಪವಾದದ್ದು) (೨) 'ಮಾತಾ ವಿನಯತೇ ಬಾಲಂ ತರುಣಂ ಸಹಧರ್ಮಿಣೀ । ಸ್ನುಷಾ ವಿನಯತೇ ವೃದ್ಧಂ ಸ್ವತಂತ್ರಃ ಸ್ಯಾತ್ ಕಥಂ ಪುಮಾನ್' (ಇದು ಮನುಸ್ಮೃತಿಯ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ'-ಎಂಬುದಕ್ಕೆ ಪ್ರತಿಯಾಗಿ ಬರೆದದ್ದು). ಲೇಖಕರಿಗೆ ನಮ್ಮ ಅಭಿನಂದನೆಗಳು.

——— ———

# ಅವಿದ್ಯೆ ಮತ್ತು ಮಾಯೆ

(ಗುರುಕಿಂಕರ)

ಶಂಕರವೇದಾಂತದಲ್ಲಿ ಅವಿದ್ಯೆಯೆಂದರೇನು ? ಮಾಯೆಯೆಂದರೇನು ? ಎಂಬ ವಿಚಾರದಲ್ಲಿ ಸಾಕಷ್ಟು ವಾದವಿವಾದಗಳಿವೆ. ಮೂಲತಃ ಅದ್ವೈತಸಿದ್ಧಾಂತಕ್ಕೆ ಉಪನಿಷತ್ತುಗಳೇ ಆಧಾರವಾಗಿದ್ದು ಪ್ರಧಾನವಾದ ಹತ್ತು ಉಪನಿಷತ್ತುಗಳನ್ನು ಶ್ರೀಶಂಕರಾಚಾರ್ಯರು ವ್ಯಾಖ್ಯಾನಮಾಡಿರುವದರಿಂದ ಉಪನಿಷದ್ವಾಕ್ಯಗಳುಹಾಗೂ ಅವುಗಳನ್ನು ವಿವರಿಸುವ ಭಾಷ್ಯವಾಕ್ಯಗಳನ್ನು ನಾವು ಚೆನ್ನಾಗಿ ಚಿಂತನೆಮಾಡಿದಲ್ಲಿ ಸಂಶಯಕ್ಕೆ ಅವಕಾಶವಿಲ್ಲದಂತೆ ಈ ಎರಡು ಪದಗಳ ಅಭಿಪ್ರಾಯವೂ ಮನದಟ್ಟಾಗಿ ಬಿಡುವದು. ಈಗ ಮೊದಲು ಅವಿದ್ಯೆಯೆಂದರೇನು? ಎಂಬಿದನ್ನು ನೋಡೋಣ.

ಶ್ರೀಶಂಕರರ ಅಭಿಪ್ರಾಯದಂತೆ **ಅವಿದ್ಯೆ-ಎಂಬುದು ಒಂದು ವಸ್ತುವಲ್ಲ. ಮತ್ತೇನೆಂದರೆ ಅಂತಃಕರಣಧರ್ಮವು.** ಅದು ವಸ್ತುಜ್ಞಾನಕ್ಕೆ ಅಡ್ಡಿಯಾಗಿರುವದು. ವಸ್ತುವು ತಿಳಿಯದಂತೆ ಮಾಡುವದಾಗಲಿ, ಹೀಗೋ ಹಾಗೋ- ಎಂದು ಸಂಶಯವುಂಟಾಗುವಂತೆ ಮಾಡುವದಾಗಲಿ, ಒಂದು ವಸ್ತುವನ್ನು ಮತ್ತೊಂದೆಂದೇ ಭ್ರಮಿಸುವಂತೆ ಮಾಡುವದಾಗಲಿ ಎಲ್ಲವೂ ಅವಿದ್ಯೆಯ ರೂಪಾಂತರಗಳೇ. **ಇದು ಕಾಲದಲ್ಲಿ ಹುಟ್ಟಿರುವದಿಲ್ಲ.** ಆದ್ದರಿಂದ ವ್ಯವಹಾರದೃಷ್ಟಿಯಿಂದ ಅನಾದಿಯೆನಿಸಿರುವದು. ಯಾರು ಬದುಕಿರುವವರೆಗೂ ಬ್ರಹ್ಮಜ್ಞಾನವನ್ನೇ ಸಂಪಾದಿಸಿಕೊಳ್ಳುವದಿಲ್ಲವೋ ಅಂಥವರ ದೃಷ್ಟಿಯಿಂದ ಅನಂತವು. ಏಕೆಂದರೆ ಜ್ಞಾನವುಂಟಾಗುವವರೆಗೂ ಇದು ಬಾಧಿತವಾಗುವದಿಲ್ಲ. **ಇದು ಅನುಭವಸಿದ್ಧವೇ ಹೊರತು ಪ್ರಮಾಣಸಿದ್ಧವಲ್ಲ.** ಆದ್ದರಿಂದಲೇ ಶ್ರೀಶಂಕರರು ಅವಿದ್ಯೆಗೆ ಉದಾಹರಣೆಯನ್ನು ಕೊಡುವಾಗ ಲೋಕಾನುಭವವನ್ನೇ ಮುಂದಿಟ್ಟುಕೊಂಡು "ಕಪ್ಪೆಯಚಿಪ್ಪು ಬೆಳ್ಳಿಯಂತೆ ತೋರುತ್ತದೆ; ಒಬ್ಬ ಚಂದ್ರನೇ ಎರಡಾಗಿ ತೋರಿಬರುವನು" ಎಂದು ತಿಳಿಸಿರುತ್ತಾರೆ. **ಈ ಅವಿದ್ಯೆಯು ಪ್ರಮಾತೃವನ್ನಾಶ್ರಯಿಸಿರುವದು.** ವಿದ್ಯೆಯಿಂದ ಬಾಧಿತವಾದಾಗ ಇದರೊಡನೆ ಪ್ರಮಾತೃವಿನ ಪ್ರಮಾತೃತ್ವವೂ ಬಾಧಿತವಾಗಿಬಿಡುವದು. ಆಗ ಸ್ವಪ್ನಕಾಲದ ಪ್ರಮಾತೃವು ಎಚ್ಚರದಲ್ಲಿ ಬಾಧಿತನಾದಂತೆ ಈ ಎಚ್ಚರದ ಪ್ರಮಾತೃವೂ ಬಾಧಿತನಾಗಿ ತಾನೇ ಸಾಕ್ಷಿಸ್ವರೂಪನಾದ ಅದ್ವಿತೀಯಾತ್ಮನೆಂಬ ಅನುಭವದಲ್ಲಿ ಜಿಜ್ಞಾಸುವು ನೆಲೆಗೊಂಡುಬಿಡುವನು. ಹೀಗೆ ಅವಿದ್ಯೆಯು ಅನಾದಿಯಾಗಿದ್ದರೂ ಹೊಸದಾಗಿ ಬರುವ ವಿದ್ಯಾವೃತ್ತಿಯಿಂದ ವಿನಾಶ್ಯವಾಗಿದೆ. ಅನಾದಿಕಾಲದಿಂದ ಪರ್ವತದ ಗುಹೆಯಲ್ಲಿದ್ದ ಕತ್ತಲೆಯು ಆಗ ತಾನೆ ಗೀರಿದ ಬೆಂಕಿಕಡ್ಡಿಯಿಂದ ಉಂಟಾದ ಬೆಳಕಿನಿಂದ ಹೋಗುವಂತೆ ಇದು ನಾಶವಾಗುತ್ತದೆ. **ಇದು ಆಗಂತುಕವೇ ಹೊರತು ಸ್ವಾಭಾವಿಕವಲ್ಲ.** ಆದ್ದರಿಂದಲೇ ಇದು ತನ್ನ ಸ್ಥಿತಿಕಾಲದಲ್ಲಿ ಆತ್ಮನಲ್ಲಿ ಸಂಸಾರಿತ್ವವನ್ನುಂಟುಮಾಡಿದ್ದಂತೆ ಕಂಡರೂ ನಾಶವಾದಾಗ ಎಂದರೆ ಜ್ಞಾನವುಂಟಾದಾಗ ಅವಿದ್ಯೆಯಿಂದ ತೋರಿದ್ದ ಸಂಸಾರಿತ್ವವು ಕರಗಿಹೋಗಿ ಪ್ರತ್ಯಗಾತ್ಮನೇ ಅನುಭವಾರೂಢನಾಗುವನು.

ಈಗ ಮಾಯೆಯೆಂದರೇನು ? ಎಂಬಿದನ್ನು ತಿಳಿಯೋಣ. ನಿಜವಾಗಿ ವಸ್ತು ವಿಲ್ಲದೆ ಅದರ ಪ್ರತ್ಯಯವು ಮಾತ್ರ ನಮ್ಮ ಮನಸ್ಸಿನಲ್ಲಿ ತೋರಿದರೆ ಮಾಯೆಯೆನ್ನು ವರು. ಶ್ರೀಶಂಕರರ ಅಭಿಪ್ರಾಯದಂತೆ **ಮಾಯೆಯು ಅವಿದ್ಯಾಕಲ್ಪಿತವು**. ಎಂದರೆ ಅವಿದ್ಯೆಯಿರುವಾಗ ತೋರತಕ್ಕದ್ದು. ಇದು ತರ್ಕಕ್ಕಾಗಲೀ ನಿರ್ವಚನಕ್ಕಾಗಲೀ ಸಿಗುವದಿಲ್ಲ. ಏಕೆಂದರೆ ಇದಕ್ಕೆ ತನ್ನದಾದ ಸತ್ತ್ವವಿರುವದಿಲ್ಲ. ಆದರೂ ಅತಿ ಗಂಭೀ ರವೂ ದುರವಗಾಹ್ಯವೂ ವಿಚಿತ್ರವೂ ಆಗಿದ್ದು ಎಲ್ಲರನ್ನೂ ಮೋಹಗೊಳಿಸಿರುತ್ತದೆ. ಇದರ ತೋರಿಕೆಯಿರುವವರೆಗೆ ಬ್ರಹ್ಮಾನುಭವವು ಗೋಚರವಾಗುವದಿಲ್ಲ. ಆದ್ದರಿಂದ ಲೇ ಈ ಪ್ರಪಂಚದಲ್ಲಿರುವವರೆಲ್ಲರಿಗೂ ಈ ಮಾಯೆಯ ಪ್ರಭಾವದಿಂದ ಪರವಸ್ತುವಿನ ಪರಮಾರ್ಥಸ್ವರೂಪದ ದರ್ಶನವಾಗದೆ ಇದೆ. ಶಾಂಕರವೇದಾಂತದಂತೆ ಈ ಮಾಯೆ ಯು ಬ್ರಹ್ಮಕ್ಕಿಂತ ಬೇರೆಯೆಂದಾಗಲಿ ಬೇರೆಯಲ್ಲವೆಂದಾಗಲಿ ಹೇಳುವದಕ್ಕೆ ಬಾರದೆ ಇರುವ ಸ್ವಭಾವದ್ದೆಂದು ತಿಳಿದುಬರುತ್ತದೆ. **ಅವಿದ್ಯೆಯಿಂದ ಕಲ್ಪಿತವಾಗಿರುವ ನಾಮರೂಪಬೀಜವೇ ಈ ಮಾಯೆಯು.** ಇದು ಪ್ರಲಯಕಾಲದಲ್ಲಿ ಸೃಷ್ಟಿಗೆ ಮುಂಚೆ ಬಿಡಿಯಾಗಿ ವಿಂಗಡವಾಗದೆ **ಅವ್ಯಾಕೃತ**ವಾಗಿರುತ್ತದೆ. ಇದೇ ಪರಮಾತ್ಮ ನು ಜಗತ್ತನ್ನು ಸೃಷ್ಟಿಸುವದಕ್ಕೆ ಕಾರಣವಾಗಿರುವದರಿಂದ ಈಶ್ವರನ ಶಕ್ತಿಯೆಂದೂ ಪ್ರಕೃತಿಯೆಂದೂ ಕರೆಯಲ್ಪಡುತ್ತದೆ. ಆದರೂ ಈಶ್ವರನು ಈ ನಾಮರೂಪಾತ್ಮಕ ವಾದ ಅವಿದ್ಯಕಮಾಯೆಗಿಂತ ವಿಲಕ್ಷಣಸ್ವಭಾವದವನಾದ್ದರಿಂದ ಅವನಿಗೆ ಈ ಮಾಯೆ ಯ ಯಾವ ದೋಷವೂ ಅಂಟುವದಿಲ್ಲವೆಂಬುದು ವೇದಾಂತಿಗಳ ಮತವು.

ಮಾಯೆ, ಅವಿದ್ಯೆಗಳು **ಅಧ್ಯಾರೋಪಾಪವಾದ ನ್ಯಾಯ**ದಿಂದ ಕಲ್ಪಿಸಿರುವ ಪದಾರ್ಥಗಳೇ ಹೊರತು ಪರಮಾರ್ಥವಲ್ಲ. ಕಾರ್ಯಕಾರಣಬುದ್ಧಿಯು ಸತ್ಯವೆಂದು ಪಟ್ಟುಹಿಡಿದಿರುವ ಮಂದಮತಿಗಳಿಗೆ ನಿಜವನ್ನು ತಿಳಿಸುವದಕ್ಕಾಗಿ ಮಾಯೆಯನ್ನು ವೇದಾಂತಿಗಳು ಅವಲಂಬಿಸಿರುತ್ತಾರೆ. ಮಾಯೆ, ಅವಿದ್ಯೆ– ಎಂಬುದೆಲ್ಲವೂ **ಸಂವೃತಿ**ಯು– ಎಂದರೆ ಅವಿದ್ಯಾವ್ಯವಹಾರವೇ– ಎಂದು ಗೌಡಪಾದರು ತಿಳಿಸು ತ್ತಾರೆ. ಆದ್ದರಿಂದ ದ್ವೈತಪ್ರಪಂಚವು ನಿಜವಾಗಿದ್ದುಕೊಂಡು ಅದ್ವೈತಜ್ಞಾನ ವುಂಟಾದ ಬಳಿಕ ನಿವೃತ್ತವಾಗುವದಿಲ್ಲ. ಹಗ್ಗದಲ್ಲಿ ಹಾವು ಎಂದಿಗೂ ಇರುವದೇ ಇಲ್ಲವಾದರೂ ಅದು ಜ್ಞಾನದಿಂದ ಹೋಗುವದೆಂಬುದು–ಮಾಯಾವಿಯು ಹರಡಿದ್ದ ಮಾಯೆಯ ಕಣ್ಣುಕಟ್ಟು ತೊಲಗಿದ ಬಳಿಕ ಹೋಯಿತು ಎಂಬ ವ್ಯವಹಾರ ದಂತೆಯೇ–ಎಂದು ತಿಳಿಯಬೇಕು.

ಈ ಪುಟ್ಟ ಲೇಖನದಲ್ಲಿ ಮಾಯೆ, ಅವಿದ್ಯೆಗಳ ತತ್ತ್ವಗಳನ್ನೆಲ್ಲ ಪೂರ್ಣವಾಗಿ ವಿಚಾರಮಾಡಲಾಗಿಲ್ಲವೆಂಬುದು ನಿಜ. ಆದರೆ ಇವುಗಳ ನಿಜವನ್ನು ವಿಚಾರ ಮಾಡಲು ಹೊರಡುವವರು ಅವಶ್ಯವಾಗಿ ಗಮನಿಸಬೇಕಾದ ಕೆಲವು ವಿಷಯ ಗಳನ್ನು ಪ್ರಸ್ತಾಪಿಸಿರುತ್ತದೆ– ಎಂದು ಹೇಳಬಹುದು. ಹೆಚ್ಚಿನ ವಿಷಯಗಳಿಗೆ ಶಂಕರಭಾಷ್ಯಗಳನ್ನೇ ಶರಣುಹೋಗೋಣ.

---

# ಯಾವ ಉದ್ಯೋಗವನ್ನು ಕೈಗೊಳ್ಳೋಣ ?

"ಸುತ್ತಮುತ್ತ ನೋಡಿದರೆ ಎಲ್ಲಾ ಉದ್ಯೋಗಗಳಲ್ಲಿಯೂ ಜನರು ತುಂಬಿ ತುಳುಕುತ್ತಿದ್ದಾರೆ. ಯಾವ ಕೆಲಸದಲ್ಲಿ ತೊಡಗಿದರೆ ನನಗೂ ಒಳ್ಳೆಯದಾಗಿ ಮತ್ತೊಬ್ಬರಿಗೂ ಉಪಕಾರವಾದೀತು ?" ಎಂದು ಒಬ್ಬ ಯುವಕನು ಒಮ್ಮೆ ಯೋಚಿಸಲಾರಂಭಿಸಿದನು.

"ವಿದ್ಯಾಶಾಲೆಯಲ್ಲಿ ಬೋಧಕನಾಗಿ ವಿದ್ಯಾದಾನವನ್ನು ಮಾಡಬಹುದು. ಆದರೆ ಈಗಿನ ಕಾಲದಲ್ಲಿ ಅಧ್ಯಾಪಕನಿಗೆ ಬರುವ ಸಂಬಳವು ಜೀವನಕ್ಕೆ ಸಾಲದು. ಮಕ್ಕಳಿಗೆ ಏನು ಕಲಿಸಬೇಕೆಂಬುದಕ್ಕೆ ನಿರ್ಬಂಧಗಳು ಹೆಚ್ಚಾಗಿವೆ; ಲಾಯರಾಗಲೆ? ಹಾಗಾದರೆ ಜನರಿಗೆ ನ್ಯಾಯವನ್ನು ದೊರಕಿಸಿಕೊಡಬಹುದು. ಆದರೆ ಕಾನೂನುಗಳ ಬಾಹುಳ್ಯದಲ್ಲಿ ನಿಜವನ್ನೇ ಹಿಡಿಯುವದು ಕಷ್ಟವಾಗುತ್ತದೆ. ಎಂಜಿನೀಯರರ ಕೆಲಸವೊ ? ಆ ಕೆಲಸದಲ್ಲಿ ಸ್ವಲ್ಪ ಹಣವು ಕೈಗೆ ಬರಬಹುದು. ಆದರೆ ಕಾಡು ಮೇಡುಗಳಲ್ಲಿ ಅಲೆಯುತ್ತಿರಬೇಕಾದೀತು. ಡಾಕ್ಟರನಾದರೊ ? ರೋಗನಿವಾರಣೆ-ಎಂಬುದೊಂದು ಜನೋಪಕಾರದ ಕೆಲಸವೇ ಅಲ್ಲವೆ ? ಆದರೆ ಪೇಟೆಂಟ್ ಔಷಧಿಗಳ ದಲ್ಲಾಳಿಯಾಗಬೇಕಾದೀತು. ವ್ಯಾಪಾರವನ್ನು ಮಾಡೋಣ- ಎನಿಸುತ್ತದೆ. ಆದರೆ ಉತ್ತಮವಾದ ಸರಕುಗಳನ್ನು ಇದ್ದಂತೆ ಮಾರಿ ಹಣ ಸಂಪಾದಿಸುವದು ಈಗ್ಗೆ ಕಷ್ಟವಾಗಿದೆಯಲ್ಲ? ಬೇಸಾಯವನ್ನು ಮಾಡಲೆ? ಜಮೀನು ಹಿಡುವಳಿಯ ವಿಷಯಕ್ಕೆ ಬಗೆಬಗೆಯ ಕಾನೂನುಗಳು ಹೊರಡುತ್ತಲೇ ಇವೆ. ರಾಜನೀತಿಗೆ ಹೊಕ್ಕರೊ? ಮತದಾರರ ಮನವೊಲಿಸುವದಕ್ಕೆ ಆತ್ಮಶ್ಲಾಘನೆ, ಪರನಿಂದೆ-ಮುಂತಾದ ಕೆಲಸಕ್ಕೂ ಇಳಿಯಬೇಕಾದೀತು. ಸಮಾಜಸುಧಾರಣೆಗೆ ಹೊರಟರೆ ಹೇಗೆ? ಜನರು ನಮ್ಮ ಮಾತನ್ನು ಕೇಳಬೇಕಲ್ಲ! ಬಡವರ ಸೇವೆಗೆ ನಿಲ್ಲಲೆ ? ನನ್ನ ಕೈಯಲ್ಲಿಯೇ ಹಣವಿಲ್ಲ. ಧರ್ಮವನ್ನೋ ತತ್ತ್ವವನ್ನೋ ಜನರಿಗೆ ಬೋಧಿಸೋಣವೆ? ಬಗೆಬಗೆಯ ವಾದವಿವಾದಗಳಲ್ಲಿ ಬೀಳಬೇಕಾಗುವದು". ಹೀಗೆಲ್ಲ ಯುವಕನು ಯೋಚಿಸಿ ಯೋಚಿಸಿ ಸಾಕಾದನು.

"ಏನನ್ನು ಯೋಚಿಸುತ್ತಿದ್ದೀಯಪ್ಪ"- ಎಂದು ಒಬ್ಬ ಸಾಧುಗಳು ಅವನ ಬಳಿಗೆ ಬಂದರು. ಇವನ ವಿಚಾರಸರಣಿಯನ್ನು ಕಿವಿಗೊಟ್ಟು ಕೇಳಿ "ಅಯ್ಯ, ಇನ್ನೊಂದು ಉದ್ಯೋಗವಿದೆ; ಆದರಲ್ಲಿ ಜನರ ಪೈಪೋಟಿ ಬಹಳ ಕಡಿಮೆ. ಹೊರಗಿನ ನಿಯಮನಿರ್ಬಂಧಗಳಿರುವದಿಲ್ಲ. ಹೊರಗೆ ಎಲ್ಲಿಯೂ ಅಲೆದಾಡಬೇಕಾದದ್ದಿಲ್ಲ. ಯಾವ ಸಾಮಗ್ರಿಯನ್ನೂ ಕೈಗೊಳ್ಳಬೇಕಾಗಿಲ್ಲ. ಜನರ ಮತವನ್ನು ಅವಲಂಬಿಸಬೇಕಾಗಿಲ್ಲ. ಅದಕ್ಕೆ ಬಂಡವಾಳವೂ ಬೇಡ. ನಿನ್ನ ಇಂದ್ರಿಯಮನಸ್ಸುಗಳನ್ನು ವಶದಲ್ಲಿಟ್ಟುಕೊಳ್ಳುವದು; ಭಗವಂತನಿಗೆ ಶರಣುಹೊಗುವದು- ಇದೇ ಆ ಉದ್ಯೋಗವು. ಇದರಲ್ಲಿ ನಿನ್ನ ಇಷ್ಟಾರ್ಥಗಳೆಲ್ಲ ನೆರವೇರುವವು"-ಎಂದರು.

—

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನ ಮಹಾಪೋಷಕರುಗಳು :** ಶ್ರೀಗಳಾದ M.P.N. 783 ಸಿ. ಸಿದ್ದಪ್ಪನವರು, ಬೆಂಗಳೂರು; 784 ಎ. ಎಸ್. ಗೋವಿಂದಯ್ಯನವರು, ಹಾಸನ; 785 ಹೆಚ್.ಎನ್. ಸುಬ್ಬಣ್ಣನವರು, ಗೌಡಹಳ್ಳಿ; 786 ಬಿ. ನಾರಣಪ್ಪನವರು, ಬಳುವನೇರಲು; 787 ಐ. ಎಸ್. ವೆಂಕಟೇಶ್ವರವರು, ಬೆಂಗಳೂರು; 788 ಡಿ. ನಾರಾಯಣರವರು, ಶೃಂಗೇರಿ; 789 ಎಸ್. ತಿಮ್ಮೇಗೌಡರು, ಬೆಂಗಳೂರು; 790 ಎ. ಎನ್. ವಿಜಯಲಕ್ಷ್ಮಿಯವರು, ಬೊಂಬಾಯಿ- ಈ ಮಹನೀಯರುಗಳು ರೂ. ೧೫೧ ರಂತೆ ಮಹಾಪೋಷಣದ್ರವ್ಯವನ್ನು ನೀಡಿ ಪತ್ರಿಕೆಯನ್ನು ಪ್ರೋತ್ಸಾಹಿಸಿದ್ದಾರೆ. MPO. No. 404 ಶ್ರೀ ಕೆ.ಎ. ಕೃಷ್ಣಸ್ವಾಮಿಯವರು, ಹಾಸನ-ಇವರು ರೂ. ೫೦ ನ್ನು ಹೆಚ್ಚಿಗೆ ನೀಡಿ ಸಹಕರಿಸಿದ್ದಾರೆ.

1984 ನೇ ಜೂನ್ ಮಾಹೆಯಲ್ಲಿ ಈ ಕೆಳಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :-

**ಗ್ರಂಥಪ್ರಕಟನ ನಿಧಿಗೆ :** ಶ್ರೀಗಳಾದ :- ಎನ್. ಚಿಕ್ಕನಂಜಪ್ಪನವರು, ಅಭಿಯಂತರು, ಬೆಳಗಾಂ ರೂ. ೨೫೦; ಅನ್ನಪೂರ್ಣಮ್ಮನವರು, ಉಪನ್ಯಾಸಕಿ, ಕೋಲಾರ ರೂ. ೫೦೧; ಬ್ರಾಹ್ಮಣಸಂಘ, ಕೋಲಾರ ರೂ. ೧೦೧; ಒಬ್ಬ ಮಹಿಳಾ ಭಕ್ತರು, ಕೋಲಾರ ರೂ. ೧೦೦೧; ಭೂಪಾಳಂ ಶಂಕರನಾರಾಯಣರವರು, ಶಿವಮೊಗ್ಗ ರೂ. ೧೦೦; ಪಿ. ಆರ್. ಹರಿಹರನ್, ಮೈಸೂರು ರೂ. ೫೧; ಎ. ನಾರಾಯಣಸ್ವಾಮಿಯವರು, ಭಿಲಾಯ್; ರೂ. ೭೫೦; ವಿ.ಎಲ್. ನಾರಾಯಣ್‌ರವರು, ಬೆಂಗಳೂರು ರೂ. ೫೦೨; ಕೆ. ವಿ. ಮಂಗಳಾಂಬರವರು, ಉಪನ್ಯಾಸಕಿ, ಚಿತ್ರದುರ್ಗ ರೂ. ೫೦೦; ಡಾ॥ ಬಿ. ಎನ್. ವೇಣುಗೋಪಾಲರಾವ್‌ರವರು, ಹಾಸನ ರೂ. ೫೦೦; ಮಿಸ್ ರತ್ನಾ ಎನ್. ರಾವ್-ಪುಣೆ ರೂ. ೫೦೦; ಒಟ್ಟು ರೂ. ४,೭೫೬.

**ಪೂಜಾಮಂದಿರ ನಿಧಿಗೆ :** ಯಾದಾಳಂ ವಂಶೀಕರು ರೂ. ೧೫; ಶ್ರೀಗಳಾದ ಕಿಕ್ಕೇರಿ ರಾಜಣ್ಣನವರು, ಕೊಪ್ಪ ರೂ. ೨೦; ಬಿ. ನರಸಿಂಹಶೆಟ್ಟರು ಮತ್ತು ಮಕ್ಕಳು, ಹೊಳೆನರಸೀಪುರ ರೂ. ೨೫; ಜನಾರ್ದನಶೆಟ್ಟರು, ಹಾರ್ಡ್‌ವೇರ್ ಸ್ಟೋರ್ಸ್, ಹೊಳೆನರಸೀಪುರ ರೂ. ೧೦; ಒಟ್ಟು ರೂ. ೭೦;

**ಗುರುಮಂದಿರ ನಿಧಿಗೆ :** ಯಾದಾಳಂ ವಂಶೀಕರು ರೂ. ೧೦;

**ವಿದ್ಯಾರ್ಥಿಖಾತೆಗೆ :** ಶ್ರೀ ಕೆಂಬಾಳು ನಂಜಪ್ಪನವರು ರೂ. ೧೦;

**ಸಂನ್ಯಾಸಿಗಳ ಸತ್ಕಾರಖಾತೆಗೆ :** ಶ್ರೀ ಎನ್. ನಾರಾಯಣರಾಯರು, ಬೆಂಗಳೂರು ರೂ. ೨೦; ಕೆ. ವಿ. ಲಲಿತಾಂಬರವರು ಹೊಳಲ್ಕೆರೆ ರೂ. ೧೦; ಒಟ್ಟು ೩೦;

ಮೇಲ್ಕಂಡ ಮಹಾಶಯರುಗಳಿಗೂ ೫೩ ನೆಯ ಸಂಪುಟಕ್ಕೆ ಚಂದಾದಾರರು, ಪೋಷಕರು, ಮಹಾಪೋಷಕರುಗಳನ್ನೂ ಜಾಹಿರಾತುಗಳನ್ನೂ ಒದಗಿಸಿಕೊಟ್ಟ ಅಭಿಮಾನಿಗಳಿಗೂ ನಮ್ಮ ಕೃತಜ್ಞತಾಪೂರ್ವಕವಾದ ಅಭಿನಂದನೆಗಳು.

———

# ಹೊರಗಿನ ಸುದ್ದಿಗಳು

೧. **ಶ್ರೀಶ್ರೀ ಆರಾಧನೆ :** (೧) **ಮೈಸೂರುಶಾಖಾಕಾರ್ಯಾಲಯದಲ್ಲಿ** ( ಶ್ರೀ ಜೆ. ಎಸ್. ತಿಮ್ಮಪ್ಪಯ್ಯನವರ ಮನೆಯಲ್ಲಿ ) ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀ ಗುರುಗಳ ಆರಾಧನೋತ್ಸವವು 26-7-84 ರಂದು ವಿಜೃಂಭಣೆಯಿಂದ ನೆರವೇರಿತು. (೨) **ರಾಯದುರ್ಗ**ದಲ್ಲಿ ಅಧ್ಯಾತ್ಮಪ್ರಚಾರಸೇವಾಶ್ರಮದಲ್ಲಿ ತಾ॥ 26-7-84 ರಿಂದ ಮೂರುದಿನಗಳ ಕಾಲ ಶ್ರೀಶ್ರೀಭಗವತ್ಪಾದಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ಶ್ರೀಶ್ರೀ ಆರಾಧನೋತ್ಸವವು ಯಶಸ್ವಿಯಾಗಿ ನೆರವೇರಿತು. ಈ ಸಂದರ್ಭದಲ್ಲಿ ಭಗವತ್ಪಾದರು, ಶ್ರೀ ಲಕ್ಷ್ಮೀಕಾಂತಶರ್ಮರು, ಶ್ರೀ ಹನುಮಂತ ರಾವ್-ರವರು ಸಹ ಶಾಂಕರಸಿದ್ಧಾಂತವನ್ನು ಅಧಿಕರಿಸಿ ಉಪನ್ಯಾಸಗಳನ್ನು ನೆರವೇರಿಸಿದರು. (೩) ಬೆಂಗಳೂರು ಉಪನಗರ ಯಲಹಂಕದ ಶ್ರೀಶಂಕರಾಶ್ರಮದಲ್ಲಿ ತಾ॥ 22-7-84 ರಂದು ಶ್ರೀಶ್ರೀಗಳವರ ಪುಣ್ಯಾರಾಧನೋತ್ಸವವು ನೆರವೇರಿತು. ಈ ಸಂದರ್ಭದಲ್ಲಿ ಶ್ರೀ ದೇವರಾಯಕುಲಕರ್ಣಿಗಳು, ಶ್ರೀ ಓ. ವಿ. ರಾಮಯ್ಯನವರು, ಶ್ರೀ ಭಗವತ್ಪಾದಸ್ವಾಮಿಗಳು, ಅಧ್ಯಾತ್ಮಪ್ರಕಾಶದ ಸಂಪಾದಕರು ಸಹ ಉಪನ್ಯಾಸಗಳನ್ನು ನಡೆಯಿಸಿದರು. ಇದರೊಂದಿಗೆ ಶ್ರೀಶಂಕರಾಶ್ರಮದಲ್ಲಿ ಏಳು ದಿನಗಳ ಕಾಲ ಯೋಗಸಾಧನಶಿಬಿರವು ನಡೆಯಿತು. ಅನೇಕ ಮಹನೀಯರುಗಳು ಭಾಗವಹಿಸಿದ್ದರು.

೨. ಬೆಂಗಳೂರು ನರಸಿಂಹರಾಜಾಕಾಲೋನಿಯಲ್ಲಿ **ಗೋಖಲೆ** ಸಾರ್ವಜನಿಕ ವಿಚಾರ ಸಂಸ್ಥೆಯ ಆಶ್ರಯದಲ್ಲಿ ತಾ॥ 15-7-84ನೆಯ ಭಾನುವಾರ ವೇದವ್ಯಾಸ ಪೂಜೆ ಹಾಗೂ ವೇದಪಾರಾಯಣಗಳು ನೆರವೇರಿದವು. ತಾ॥ 23-7-84ರಂದು ಶ್ರೀ ಭದ್ರಗಿರಿ ಅಚ್ಯುತದಾಸರಿಂದ ಹರಿಕಥೆಯೂ ನಡೆಯಿತು.

೩. **ಹಾಸನ**ದಲ್ಲಿ ಶ್ರೀಶಂಕರಮಠದಲ್ಲಿ ಅಧ್ಯಾತ್ಮವಿಚಾರಾಭಿಮಾನಿಗಳ ಸಂಘವೊಂದು ಈಚೆಗೆ ಸ್ಥಾಪಿತವಾಗಿದ್ದು ಶಿವಮೊಗ್ಗದ ಶ್ರೀ ವೇಣುಗೋಪಾಲ ರಾವ್-ರವರು ಪ್ರಾರಂಭಿಕವಾದ ಎರಡು ಉಪನ್ಯಾಸಗಳನ್ನು ನೆರವೇರಿಸಿದರು. ಅನಂತರ ತಾ॥ 19 ಹಾಗೂ 20-7-84 ರಂದು ಈ ಪತ್ರಿಕೆಯ ಸಂಪಾದಕರು ಎರಡು ಉಪನ್ಯಾಸಗಳನ್ನು ನಡೆಯಿಸಿದರು. ಈ ಸಂಘದ ಆಶ್ರಯದಲ್ಲಿ 12-8-84 ರಂದು ಸಾಮೂಹಿಕ ಗಾಯತ್ರೀ ಜಪ-ಹೋಮಗಳೂ ಅನಂತರ ಒಂದು ವಾರ ಕಾಲ ಅಧ್ಯಾತ್ಮೋಪನ್ಯಾಸಗಳೂ ಏರ್ಪಾಡಾಗಿವೆ.

೪. ಶ್ರೀದ್ವಾರಕಾಜಗದ್ಗುರುಸಂಸ್ಥಾನದ ಶ್ರೀಶ್ರೀಕೃಷ್ಣಾನಂದತೀರ್ಥಸ್ವಾಮಿಗಳು ಈ ವರ್ಷದ ಚಾತುರ್ಮಾಸ್ಯಸಂಕಲ್ಪವನ್ನು **ಧಾರವಾಡ**ದಲ್ಲಿ ಸಂಸ್ಕೃತಪಾಠಶಾಲೆಯಲ್ಲಿ ನೆರವೇರಿಸಿದುದಾಗಿ ಶ್ರೀಮಠದ ಏಜಂಟರು ತಿಳಿಸಿರುತ್ತಾರೆ.

೫. **ಬೆಂಗಳೂರು ತ್ಯಾಗರಾಜನಗರ**ದಲ್ಲಿ ಈಗಾಗಲೆ ಪ್ರಕಟಿಸಿದ್ದ ಕಾರ್ಯಕ್ರಮದಂತೆ ಶ್ರೀಶ್ರೀ ಆರಾಧನೋತ್ಸವವು ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಈ ಜ್ಞಾನಸತ್ರದಲ್ಲಿ ಘನವಿದ್ವಾಂಸರುಗಳಿಂದ ಅಮೋಘಉಪನ್ಯಾಸಗಳು ರಸಪೂರಿತವಾಗಿಯೂ ವಿಚಾರಪ್ರಚೋದಕವಾಗಿಯೂ ನಡೆದವು.

---

*With best Compliments from :*

# KHADI MANDIR

*Proprietor :*

**M. R. MARKANDEYA**



**No 5, Avenue Road,**
**BANGALORE CITY**

---

ಸ್ಥಾಪನೆ: 1912 (ರಿಜಿಸ್ಟರ್ಡ್ ಇನ್‌ಷೂರ್ಡ್ ಬ್ಯಾಂಕ್) ಫೋನ್ 42.

## ಶ್ರೀ ವಾಸವಾಂಬ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಪಿ. ಬಿ. ನಂ. 3, **ಹೊಳೆನರಸೀಪುರ**-573211

71 ವರ್ಷಗಳ ಉತ್ತಮ ಸೇವೆ ಸಲ್ಲಿಸಿ ಅಭಿವೃದ್ಧಿ ಹೊಂದುತ್ತಿರುವ ಸಹಕಾರಿ ಬ್ಯಾಂಕ್. ಎಲ್ಲಾ ವಿಧವಾದ ಬ್ಯಾಂಕಿಂಗ್ ವ್ಯವಹಾರಗಳನ್ನು ನಡೆಸಲಾಗುತ್ತಿದೆ.

ಕಳೆದ ಮೂವತ್ತು ವರ್ಷಗಳಿಂದ ಸುಸ್ತಿ ಸಾಲಗಳ ದಾವಾಕ್ರಮವಿರುವುದಿಲ್ಲ.

1974ನೇ ಏಪ್ರಿಲ್ ಮಾಹೆಯಲ್ಲಿ ವಜ್ರಮಹೋತ್ಸವದ ಸವಿನೆನಪಿಗಾಗಿ ಬಿಡುಗಡೆ ಮಾಡಿರುವ ಕ್ಯಾಷ್‌ಸರ್ಟಿಫಿಕೇಟ್ ಜನಪ್ರಿಯವಾಗಿ ರೂ. 24 ಲಕ್ಷಕ್ಕೂ ಮಿಗಿಲಾಗಿ ಠೇವಣಿ ಸ್ವೀಕರಿಸಲಾಗಿದೆ.

ನಾವು ಇತರೆ ವಾಣಿಜ್ಯ ಬ್ಯಾಂಕುಗಳು ಡಿಪಾಸಿಟ್‌ಗಳ ಮೇಲೆ ಕೊಡುವ ಬಡ್ಡಿಗಿಂತಲೂ ಶೇಕಡ ಒಂದರಷ್ಟು ಹೆಚ್ಚಿಗೆ ಬಡ್ಡಿ ಕೊಡುತ್ತೇವೆ.

| | (ಲಕ್ಷಗಳಲ್ಲಿ ರೂ.) | | (ಲಕ್ಷಗಳಲ್ಲಿ ರೂ.) |
|---|---|---|---|
| 1) ಷೇರು ಬಂಡವಾಳ | 1.79 | 3) ಡಿಪಾಸಿಟ್‌ಗಳು | 52.00 |
| 2) ದುಡಿಯುವ ಬಂಡವಾಳ | 58.63 | 4) ರಿಸರ್ವ್ ಫಂಡು | 0.67 |

**ಕೆ. ಎನ್. ಅರುಣ್,**
ಅಧ್ಯಕ್ಷರು.

**ಕೆ. ಎನ್. ಶ್ರೀನಿವಾಸ್,**
ಕಾರ್ಯದರ್ಶಿ.

ಆನಂದವು ದೊರಕಿಯೇ ದೊರಕುತ್ತದೆ ಎಂಬುದನ್ನು- ನೆನಪುಕೊಡುತ್ತದೆ. ಅಯ್ಯ ಕಪಿಯೆ, ನಿನಗೆ ಮಂಗಳವಾಗಲಿ; ಶ್ರೀರಾಮನಿಗೂ ಕಪಿಗಳಿಗೂ ಸಮಾಗಮವು ಹೇಗೆ ಉಂಟಾಯಿತು? ನಿಜವನ್ನು ಹೇಳು. ನಿನ್ನ ಮಾತನ್ನು ನಂಬಿರುವೆನು.

**ಏವಮುಕ್ತೋಽಥ ಹನುಮಾನ್ ಭರತೇನ ಮಹಾತ್ಮನಾ ।**
**ಆಚಚಕ್ಷೇಽಥ ರಾಮಸ್ಯ ಚರಿತಂ ಕೃತ್ಸ್ನಶಃ ಕ್ರಮಾತ್ ॥೬೩॥**
**ಶ್ರುತ್ವಾ ತು ಪರಮಾನಂದಂ ಭರತೋ ಮಾರುತಾತ್ಮಜಾತ್ ।**
**ಆಜ್ಞಾಪಯತ್ ಶತ್ರುಹಣಂ ಮುದಾ ಯುಕ್ತಂ ಮುದಾನ್ವಿತಃ ॥೬೪॥**
**ದೈವತಾನಿ ಚ ಯಾವಂತಿ ನಗರೇ ರಘುನಂದನ ।**
**ನಾನೋಪಹಾರಬಲಿಭಿಃ ಪೂಜಯಂತು ಮಹಾಧಿಯಃ ॥೬೫॥**

೬೩-೬೫. ಮಹಾತ್ಮನಾದ ಭರತನಿಂದ ಹೀಗೆ ಹೇಳಲ್ಪಟ್ಟ ಹನುಮಂತನು ಶ್ರೀರಾಮನ ಚರಿತ್ರೆಯನ್ನು ಸಂಪೂರ್ಣವಾಗಿ ಕ್ರಮವಾಗಿ ಹೇಳಲಾರಂಭಿಸಿದನು. ಹನುಮಂತನ ಕಡೆಯಿಂದ ಭರತನು ಪರಮಾನಂದಯುಕ್ತವಾದ ಚರಿತ್ರೆಯನ್ನು ಕೇಳಿ ಸಂತೋಷಗೊಂಡವನಾಗಿ ಆನಂದಭರಿತನಾದ ಶತ್ರುಘ್ನನನ್ನು ಕುರಿತು "ಎಲೈ ರಘುಶ್ರೇಷ್ಠನೆ, (ಅಯೋಧ್ಯಾ)ನಗರಿಯಲ್ಲಿ ಎಷ್ಟು ದೇವರುಗಳಿರುವವೋ ಅವುಗಳನ್ನೆಲ್ಲ ಪ್ರಾಜ್ಞರಾದ (ಅರ್ಚಕರು) ನಾನಾ ವಿಧವಾದ ಪೂಜಾ-ಬಲಿ-ಉಪಚಾರಗಳಿಂದ ಅರ್ಚಿಸಲಿ".

**ಸೂತಾ ವೈತಾಲಿಕಾಶ್ಚೈವ ವಂದಿನಸ್ತುತಿಪಾಠಕಾಃ ।**
**ವಾರಮುಖ್ಯಾಶ್ಚ ಶತಶಃ ನಿರ್ಯಾಂತ್ವದ್ಯೈವ ಸಂಘಶಃ ॥೬೬॥**
**ರಾಜದಾರಾಸ್ತಥಾಮಾತ್ಯಾ ಸೇನಾಹಸ್ತ್ಯಶ್ವಪತ್ತಯಃ ।**
**ಬ್ರಾಹ್ಮಣಾಶ್ಚ ತಥಾ ಪೌರಾ ರಾಜಾನೋ ಯೇ ಸಮಾಗತಾಃ ॥೬೭॥**
**ನಿರ್ಯಾಂತು ರಾಘವಸ್ಯಾದ್ಯ ದ್ರಷ್ಟುಂ ಶಶಿನಿಭಾನನಮ್ ।**

೬೬-೬೭. ಸೂತರುಗಳು, ಸ್ತುತಿಪಾಠಕರು, ವಂದಿಮಾಗಧರು, ವಾರಾಂಗನೆಯರು- ಮುಂತಾಗಿ ಎಲ್ಲರೂ ಗುಂಪಾಗಿ ನೂರಾರುಗಟ್ಟಲೆ ಹೊರಡಲಿ. ರಾಜಪತ್ನಿಯರು, ಅಮಾತ್ಯರುಗಳು, ಕುದುರೆ, ಆನೆ, ಕಾಲಾಳುಗಳಿಂದ ಕೂಡಿದ ಸೇನೆ, ಬ್ರಾಹ್ಮಣರು, ಪೌರರು (ಅಯೋಧ್ಯೆಗೆ) ಬಂದಿರುವ ರಾಜರುಗಳು ಎಲ್ಲರೂ ಶ್ರೀರಾಮನ ಚಂದ್ರಸಮಾನವಾದ ಮುಖವನ್ನು ದರ್ಶನ ಮಾಡುವದಕ್ಕಾಗಿ ಹೊರಡಲಿ.

**ಭರತಸ್ಯ ವಚಃ ಶ್ರುತ್ವಾ ಶತ್ರುಘ್ನಪರಿಚೋದಿತಾಃ ।**
**ಅಲಂಚಕ್ರುಶ್ಚ ನಗರೀಂ ಮುಕ್ತಾರತ್ನಮಯೋಜ್ಜ್ವಲೈಃ ॥೬೮॥**

**ತೋರಣೈಶ್ಚ ಪತಾಕಾಭಿರ್ವಿಚಿತ್ರಾಭಿರನೇಕಧಾ ।**
**ಅಲಂಕುರ್ವಂತಿ ವೇಶ್ಮಾನಿ ನಾನಾಬಲಿವಿಚಕ್ಷಣಾಃ** ||೧೯||

೧೮–೧೯. ಭರತನ ಮಾತನ್ನು ಕೇಳಿ ಶತ್ರುಘ್ನನಿಂದ ಪ್ರೇರಿತರಾದ (ಜನರು) ಪಟ್ಟಣವನ್ನು ಮುತ್ತುರತ್ನಗಳಿಂದ ಹೊಳೆಯುವ ತೋರಣಗಳಿಂದಲೂ ವಿಚಿತ್ರವಾದ ಬಾವುಟಗಳಿಂದಲೂ ನಾನಾರೀತಿಯಾಗಿ ಅಲಂಕರಿಸಿದರು. ಹಾಗೆಯೇ ಅನೇಕರೀತಿಯ ಪೂಜಾಲಂಕಾರಗಳಿಂದ ಮನೆಗಳನ್ನು ಸಿಂಗರಿಸಿದರು.

**ನಿರ್ಯಾಂತಿ ವೃಂದಶಃ ಸರ್ವೇ ರಾಮದರ್ಶನಲಾಲಸಾಃ ।**
**ಹಯಾನಾಂ ಶತಸಾಹಸ್ರಂ ಗಜಾನಾಮಯುತಂ ತಥಾ** ||೨೦||
**ರಥಾನಾಂ ದಶಸಾಹಸ್ರಂ ಸ್ವರ್ಣಸೂತ್ರವಿಭೂಷಿತಮ್ ।**
**ಪಾರಮೇಷ್ಠ್ಯೀನ್ಯುಪಾದಾಯ ದ್ರವ್ಯಾಣ್ಯುಚ್ಚಾವಚಾನಿ ಚ** ||೨೧||

೨೦–೨೧. ನೂರುಸಾವಿರ ಕುದುರೆಗಳು, ಹತ್ತುಸಾವಿರ ಆನೆಗಳು, ಮತ್ತು ಚಿನ್ನದ ದಾರಗಳನ್ನು ಹೆಣೆದು ಅಲಂಕರಿಸಿದ್ದ ರಥಗಳು, ಹೀಗೆ ಬೆಲೆ ಬಾಳುವ ಹಾಗೂ ಸಾಧಾರಣವಾದ ಎಲ್ಲಾ ಪದಾರ್ಥಗಳನ್ನೂ ಕಾಣಿಕೆಗಳಾಗಿ ತೆಗೆದುಕೊಂಡು ರಾಮನನ್ನು ನೋಡಬೇಕೆಂಬ ಇಚ್ಛೆಯಿಂದ ಗುಂಪುಗುಂಪಾಗಿ ಎಲ್ಲರೂ ಬರುತ್ತಿದ್ದರು.

**ತತಸ್ತು ಶಿಬಿಕಾರೂಢಾ ನಿರ್ಯಯೂ ರಾಜಯೋಷಿತಃ ।**
**ಭರತಃ ಪಾದುಕೇ ನ್ಯಸ್ಯ ಶಿರಸ್ಯೇವ ಕೃತಾಂಜಲಿಃ** ||೨೨||
**ಶತ್ರುಘ್ನಸಹಿತೋ ರಾಮಂ ಪಾದಚಾರೇಣ ನಿರ್ಯಯೌ ।**

೨೨. ಅನಂತರ ರಾಜಸ್ತ್ರೀಯರೆಲ್ಲರೂ ಪಲ್ಲಕ್ಕಿಗಳನ್ನು ಏರಿದವರಾಗಿ ಹೊರಟರು. ಭರತನಾದರೊ, ತಲೆಯಮೇಲೆಯೇ (ರಾಮ) ಪಾದುಕೆಗಳನ್ನು ಹೊತ್ತು ಕೈಮುಗಿದುಕೊಂಡು ಶತ್ರುಘ್ನನೊಡಗೂಡಿ ಕಾಲುನಡಗೆಯಿಂದಲೇ ಹೊರಟನು.

**ತದೈವ ದೃಶ್ಯತೇ ದೂರಾದ್ ವಿಮಾನಂ ಚಂದ್ರಸನ್ನಿಭಮ್ ।**
**ಪುಷ್ಪಕಂ ಸೂರ್ಯಸಂಕಾಶಂ ಮನಸಾ ಬ್ರಹ್ಮನಿರ್ಮಿತಮ್** ||೨೩||
**ಏತಸ್ಮಿನ್ ಭ್ರಾತರೌ ವೀರೌ ವೈದೇಹ್ಯಾ ರಾಮಲಕ್ಷ್ಮಣೌ ।**
**ಸುಗ್ರೀವಶ್ಚ ಕಪಿಶ್ರೇಷ್ಠೋ ಮಂತ್ರಿಭಿಶ್ಚ ವಿಭೀಷಣಃ** ||೨೪||
**ದೃಶ್ಯತೇ ಪಶ್ಯತ ಜನಾ ಇತ್ಯಾಹ ಪವನಾತ್ಮಜಃ ।**

೨೩–೨೪. ಆ ವೇಳೆಗಾಗಲೇ ಚಂದ್ರನಂತೆ ಕಾಣುತ್ತಿದ್ದ ಹಾಗೂ ಸೂರ್ಯನಂತೆ ಹೊಳೆಯುತ್ತಿದ್ದ ಬ್ರಹ್ಮನ ಮಾನಸಸೃಷ್ಟಿಯಾದ ಪುಷ್ಪಕವಿಮಾನವು

ಕಾಣಿಸಿಕೊಂಡಿತು. ಆಗ ಹನುಮಂತನು "ಎಲೈ ಜನಗಳಿರಾ, ನೋಡಿರಿ; ಈ ವಿಮಾನದಲ್ಲಿ ವೀರರಾದ ಭ್ರಾತೃಗಳಾದ ರಾಮಲಕ್ಷ್ಮಣರು ಸೀತೆಯೊಡನೆ ಇದ್ದಾರೆ. ಕಪಿಶ್ರೇಷ್ಠನಾದ ಸುಗ್ರೀವನೂ ಮಂತ್ರಿಗಳೊಡಗೂಡಿದ ವಿಭೀಷಣನೂ ಕಂಡುಬರುತ್ತಿದ್ದಾರೆ" ಎಂದನು.

**ತತೋ ಹರ್ಷಸಮುದ್ಭೂತೋ ನಿಃಸ್ವನೋ ದಿವಮಸ್ಪೃಶತ್ ।**
**ಸ್ತ್ರೀಬಾಲಯುವವೃದ್ಧಾನಾಂ ರಾಮೋಽಯಮಿತಿ ಕೀರ್ತನಾತ್ ॥೭೫॥**

**ರಥಕುಂಜರವಾಜಿಸ್ಥಾ ಅವತೀರ್ಯ ಮಹೀಂ ಗತಾಃ ।**
**ದದೃಶುಸ್ತೇ ವಿಮಾನಸ್ಥಂ ಜನಾಃ ಸೋಮಮಿವಾಂಬರೇ ॥೭೬॥**

೭೫-೭೬. ಅನಂತರ ಸ್ತ್ರೀಯರು, ಬಾಲಕರು, ಯುವಜನರು, ವೃದ್ಧರೇ ಮುಂತಾದವರ ಹರ್ಷದಿಂದೊಡಗೂಡಿದ 'ಇವನೇ ರಾಮನು' ಎಂಬ ಗಟ್ಟಿಯಾದ ಕೂಗು ಸ್ವರ್ಗಲೋಕವನ್ನು ಮುಟ್ಟಿತು. ರಥ, ಆನೆ, ಕುದುರೆಗಳಮೇಲೆ ಕುಳಿತಿದ್ದವರೆಲ್ಲರೂ ಕೆಳಗಿಳಿದು ಭೂಮಿಯಮೇಲೆ ನಿಂತರು. ಆ ಜನರೆಲ್ಲರೂ ಆಕಾಶದಲ್ಲಿ ಚಂದ್ರನನ್ನು ಕಂಡಂತೆ ವಿಮಾನದಲ್ಲಿದ್ದ ರಾಮನನ್ನು ಕಂಡರು.

**ಪ್ರಾಂಜಲಿರ್ಭರತೋ ಭೂತ್ವಾ ಪ್ರಹೃಷ್ಟೋ ರಾಘವೋನ್ಮುಖಃ ।**
**ತತೋ ವಿಮಾನಾಗ್ರಗತಂ ಭರತೋ ರಾಘವಂ ಮುದಾ ॥೭೭॥**

**ವವಂದೇ ಪ್ರಣತೋ ರಾಮಂ ಮೇರುಸ್ಥಮಿವ ಭಾಸ್ಕರಮ್ ।**
**ತತೋ ರಾಮಾಭ್ಯನುಜ್ಞಾತಂ ವಿಮಾನಮಪತದ್ ಭುವಿ ॥೭೮॥**

**ಆರೋಪಿತೋ ವಿಮಾನಂ ತದ್ಭರತಃ ಸಾನುಜಸ್ತದಾ ।**
**ರಾಮಮಾಸಾದ್ಯ ಮುದಿತಃ ಪುನರೇವಾಭ್ಯವಾದಯತ್ ॥೭೯॥**

೭೭-೭೯. ರಾಮನಕಡೆಗೆ ತಿರುಗಿದ, ಕೈಮುಗಿದುಕೊಂಡಿದ್ದ ಭರತನು ಬಹಳ ಸಂತೋಷಗೊಂಡವನಾಗಿ ವಿಮಾನದಲ್ಲಿ ಅಗ್ರಾಸನದಲ್ಲಿ ಕುಳಿತಿದ್ದ ಮೇರುಪರ್ವತದಲ್ಲಿರುವ ಸೂರ್ಯನಂತಿದ್ದ ರಾಮನನ್ನು ನಮ್ರನಾಗಿ ನಮಸ್ಕರಿಸಿದನು. ಅನಂತರ ರಾಮನ ಅಪ್ಪಣೆಯನ್ನು ಪಡೆದು ವಿಮಾನವು ಭೂಮಿಗೆ ಇಳಿಯಿತು. ಶತ್ರುಘ್ನನೊಡನೆ ವಿಮಾನವನ್ನೇರಿದ ಭರತನು ರಾಮನನ್ನು ಬಳಿಸಾರಿ ಸಂತೋಷದಿಂದ ಮತ್ತೆ ನಮಸ್ಕಾರಮಾಡಿದನು.

**ಸಮುತ್ಥಾಪ್ಯ ಚಿರಾದ್ ದೃಷ್ಟಂ ಭರತಂ ರಘುನಂದನಃ ।**
**ಭ್ರಾತರಂ ಸ್ವಾಂಕಮಾರೋಪ್ಯ ಮುದಾ ತಂ ಪರಿಷಸ್ವಜೇ ॥೮೦॥**

**ತತೋ ಲಕ್ಷ್ಮಣಮಾಸಾದ್ಯ ವೈದೇಹೀಂ ನಾಮ ಕೀರ್ತಯನ್ ।**
**ಅಭ್ಯವಾದಯತ ಪ್ರೀತೋ ಭರತಃ ಪ್ರೇಮವಿಹ್ವಲಃ ॥೮೧॥**

**ಸುಗ್ರೀವಂ ಜಾಂಬವಂತಂ ಚ ಯುವರಾಜಂ ತಥಾಂಗದಮ್ ।**
**ಮೈಂದದ್ವಿವಿದನೀಲಾಂಶ್ಚ ಋಷಭಂ ಚೈವ ಸಸ್ವಜೇ ॥೮೨॥**
**ಸುಷೇಣಂ ಚ ನಲಂ ಚೈವ ಗವಾಕ್ಷಂ ಗಂಧಮಾದನಮ್ ।**
**ಶರಭಂ ಪನಸಂ ಚೈವ ಭರತಃ ಪರಿಷಸ್ವಜೇ ॥೮೩॥**

೮೦-೮೩. ರಘುಪುತ್ರನಾದ ಶ್ರೀರಾಮನು ಬಹಳ ಕಾಲದ ಅನಂತರ ಕಂಡ ಭರತನನ್ನು ಮೇಲಕ್ಕೆಬ್ಬಿಸಿ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆನಂದದಿಂದ ಆಲಿಂಗಿಸಿಕೊಂಡನು. ಅನಂತರ ಭರತನು ಸೀತಾದೇವಿಯ ಹೆಸರನ್ನು ಉಚ್ಚರಿಸುತ್ತಾ ಪ್ರೇಮಪೂರಿತನಾಗಿ ನಮಸ್ಕರಿಸಿದನು. ಲಕ್ಷ್ಮಣನನ್ನು(ಚಿಕ್ಕವನಾದ್ದರಿಂದ) ಅಭಿನಂದಿಸಿದನು. ಹಾಗೆಯೇ ಸುಗ್ರೀವ, ಜಾಂಬವಂತ, ಯುವರಾಜನಾದ ಅಂಗದ, ಮೈಂದ, ದ್ವಿವಿದ, ನೀಲ, ಋಷಭರುಗಳನ್ನೂ, ಸುಷೇಣ, ನಲ, ಗವಾಕ್ಷ, ಗಂಧಮಾದನ, ಶರಭ, ಪನಸ– ಇವರುಗಳನ್ನೂ ಭರತನು ಅಪ್ಪಿಕೊಂಡನು.

**ಸರ್ವೇ ತೇ ಮಾನುಷಂ ರೂಪಂ ಕೃತ್ವಾ ಭರತಮಾದೃತಾಃ ।**
**ಪಪ್ರಚ್ಛುಃ ಕುಶಲಂ ಸೌಮ್ಯಾಃ ಪ್ರಹೃಷ್ಟಾಶ್ಚ ಪ್ಲವಂಗಮಾಃ ॥೮೪॥**
**ತತಃ ಸುಗ್ರೀವಮಾಲಿಂಗ್ಯ ಭರತಃ ಪ್ರಾಹ ಭಕ್ತಿತಃ ।**
**ತ್ವತ್ಸಹಾಯೇನ ರಾಮಸ್ಯ ಜಯೋಽಭೂದ್ ರಾವಣೋ ಹತಃ ॥೮೫॥**
**ತ್ವಮಸ್ಮಾಕಂ ಚತುರ್ಣಾಂ ತು ಭ್ರಾತಾ ಸುಗ್ರೀವ ಪಂಚಮಃ ।**

೮೪–೮೫. ಸೌಮ್ಯರಾದ ಅವರೆಲ್ಲರೂ ಮನುಷ್ಯರೂಪವನ್ನು ಧರಿಸಿ ಆದರದಿಂದ ಭರತನನ್ನು ಕುಶಲಪ್ರಶ್ನೆಮಾಡಿದರು. ಹಾಗೂ ಆ ಕಪಿಗಳೆಲ್ಲರೂ ಬಹಳ ಆನಂದದಿಂದ ಕೂಡಿದ್ದರು. ಅನಂತರ ಭರತನು ಸುಗ್ರೀವನನ್ನು ಆಲಿಂಗಿಸಿಕೊಂಡು ಭಕ್ತಿಯಿಂದ ಹೀಗೆಂದನು. "ಎಲೈ ಸುಗ್ರೀವನೆ, ನಿನ್ನ ಸಹಾಯದಿಂದ ರಾಮನಿಗೆ ವಿಜಯವಾಯಿತು. ರಾವಣನು ನಾಶಹೊಂದಿದನು. ನೀನಾದರೊ, ನಾವು ನಾಲ್ವರು ಸಹೋದರರ ಜೊತೆಗೆ ಐದನೆಯವನಾಗಿರುವೆ."

**ಶತ್ರುಘ್ನಶ್ಚ ತದಾ ರಾಮಮಭಿವಾದ್ಯ ಸಲಕ್ಷ್ಮಣಮ್ ।**
**ಸೀತಾಯಾಶ್ಚರಣೌ ಪಶ್ಚಾದ್ ವವಂದೇ ವಿನಯಾನ್ವಿತಃ ॥ ೮೬ ॥**
**ರಾಮೋ ಮಾತರಮಾಸಾದ್ಯ ವಿವರ್ಣಾಂ ಶೋಕವಿಹ್ವಲಾಮ್ ।**
**ಜಗ್ರಾಹ ಪ್ರಣತಃ ಪಾದೌ ಮನೋ ಮಾತುಃ ಪ್ರಸಾದಯನ್ ॥ ೮೭ ॥**
**ಕೈಕೇಯೀಂ ಚ ಸುಮಿತ್ರಾಂ ಚ ನನಾಮೇತರಮಾತರಃ ।**

೮೬-೮೭. ಆಗ ಶತ್ರುಘ್ನನು ಲಕ್ಷ್ಮಣಸಹಿತನಾದ ರಾಮನನ್ನು ನಮಸ್ಕರಿಸಿ ಅನಂತರ ಸೀತಾದೇವಿಯ ಎರಡು ಪಾದಗಳಿಗೂ ವಿನಯದಿಂದ ನಮಸ್ಕರಿ

ಸಿದನು. ದುಃಖದಿಂದ ಬಳಲಿದವಳೂ ವಿಷಾದಹೊಂದಿದವಳೂ ಆಗಿದ್ದ ತಾಯಿಯಾದ(ಕೌಸಲ್ಯೆಯನ್ನು) ರಾಮನು ಬಳಿಸಾರಿದವನಾಗಿ, ತಾಯಿಯ ಮನಸ್ಸನ್ನು ಸಮಾಧಾನಗೊಳಿಸುತ್ತಾ, ಬಗ್ಗಿ ಪಾದಗಳನ್ನು ಹಿಡಿದುಕೊಂಡನು. ಅನಂತರ ಕೈಕೇಯಿಯಾ, ಸುಮಿತ್ರಾ- ತಾಯಂದಿರಿಗೂ ನಮಸ್ಕರಿಸಿದನು.

**ಭರತಃ ಪಾದುಕೇ ತೇ ತು ರಾಘವಸ್ಯ ಸುಪೂಜಿತೇ ।**
**ಯೋಜಯಾಮಾಸ ರಾಮಸ್ಯ ಪಾದಯೋರ್ಭಕ್ತಿಸಂಯುತಃ ॥೮೮॥**

**ರಾಜ್ಯಮೇತನ್ನ್ಯಾಸಭೂತಂ ಮಯಾ ನಿರ್ಯಾತಿತಂ ತವ ।**
**ಅದ್ಯ ಮೇ ಸಫಲಂ ಜನ್ಮ ಫಲಿತೋ ಮೇ ಮನೋರಥಃ ॥೮೯॥**

**ಯತ್ಪಶ್ಯಾಮಿ ಸಮಾಯಾತಮಯೋಧ್ಯಾಂ ತ್ವಾಮಹಂ ಪ್ರಭೋ ।**
**ಕೋಷ್ಠಾಗಾರಂ ಬಲಂ ಕೋಶಂ ಕೃತಂ ದಶಗುಣಂ ಮಯಾ ।**
**ತ್ವತ್ತೇಜಸಾ ಜಗನ್ನಾಥ ಪಾಲಯಸ್ವ ಪುರಂ ಸ್ವಕಮ್ ॥೯೦॥**

೮೮-೯೦. ಭರತನು ಚೆನ್ನಾಗಿ ಪೂಜಿಸಲ್ಪಟ್ಟ ಶ್ರೀರಾಮನ ಆ ಎರಡು ಪಾದುಕೆಗಳನ್ನು ಭಕ್ತಿಯಿಂದ ಕೂಡಿದವನಾಗಿ ರಾಮನ ಎರಡು ಪಾದಗಳಿಗೆ ತೊಡಿಸಿದನು. "ಎಲೈ ಪ್ರಭುವೆ, ಈ ಯಾವ ರಾಜ್ಯವು ನನ್ನಲ್ಲಿ ನ್ಯಾಸವಾಗಿ ಇಡಲ್ಪಟ್ಟಿತ್ತೋ ಅದನ್ನು ನಿನಗೆ ಈಗ ಅರ್ಪಿಸಿರುವೆನು. ಇನ್ನು ನನ್ನ ಹುಟ್ಟು ಸಾರ್ಥಕವಾಯಿತು. ನನ್ನ ಇಷ್ಟಾರ್ಥವೂ ನೆರವೇರಿತು. ಏಕೆಂದರೆ ನೀನು ಅಯೋಧ್ಯೆಗೆ ಹಿಂದಿರುಗಿ ಬಂದಿರುವೆ. ಈವರೆಗೆ ಸೈನ್ಯ, ಭಂಡಾರ, ಬಲ, ಎಲ್ಲವನ್ನೂ ಹತ್ತುಪಟ್ಟು ಬೆಳೆಯಿಸಿರುವೆನು. ಇದು ನಿನ್ನ ಮಹಿಮೆಯೇ- ಎಂದು ತಿಳಿದಿರುವೆನು. ಎಲೈ ಜಗನ್ನಾಥನೆ, ಇನ್ನು ನಿನ್ನ ನಗರವನ್ನು ನೀನು ಕಾಪಾಡುವವನಾಗು"-(ಎಂದು ಹೇಳಿದನು.)

**ಇತಿ ಬ್ರುವಾಣಂ ಭರತಂ ದೃಷ್ಟ್ವಾ ಸರ್ವೇ ಕಪೀಶ್ವರಾಃ ।**
**ಮುಮುಚುರ್ನೇತ್ರಜಂ ತೋಯಂ ಪ್ರಶಶಂಸುರ್ಮುದಾನ್ವಿತಾಃ ॥೯೧॥**
**ತತೋ ರಾಮಃ ಪ್ರಹೃಷ್ಟಾತ್ಮಾ ಭರತಂ ಸ್ವಾಂಕಗಂ ಮುದಾ ।**
**ಯಯೌ ತೇನ ವಿಮಾನೇನ ಭರತಸ್ಯಾಶ್ರಮಂ ತದಾ ॥೯೨॥**
**ಅವರುಹ್ಯ ತದಾ ರಾಮೋ ವಿಮಾನಾಗ್ರ್ಯಾನ್ಮಹೀತಲಮ್ ।**

೯೧-೯೨. ಈ ರೀತಿಯಾಗಿ ಹೇಳುತ್ತಿರುವ ಭರತನನ್ನು ಕಂಡು ಕಪಿಶ್ರೇಷ್ಠರೆಲ್ಲರೂ ಆನಂದಬಾಷ್ಪವನ್ನು ಸುರಿಸಿದರು. ಸಂತೋಷದಿಂದ ಭರತನನ್ನು ಹೊಗಳಿದರು. ಅನಂತರ ರಾಮನು ಸಂತೋಷಗೊಂಡವನಾಗಿ ತನ್ನ ತೊಡೆಯ ಮೇಲೆ ಭರತನು ಕುಳಿತಿದ್ದಂತೆಯೇ ಅದೇ ವಿಮಾನದಲ್ಲಿ ಭರತನ ಆಶ್ರಮಕ್ಕೆ ಬಂದನು. ಆ ಶ್ರೇಷ್ಠವಾದ ವಿಮಾನದಿಂದ ನೆಲದ ಮೇಲೆ ಅಲ್ಲಿಳಿದ್ದುಬಿಟ್ಟನು.

ಅಬ್ರವೀತ್ ಪುಷ್ಪಕಂ ದೇವೋ ಗಚ್ಛ ವೈಶ್ರವಣಂ ವಹ ।
ಅನುಗಚ್ಛಾನುಜಾನಾಮಿ ಕುಬೇರಂ ಧನಪಾಲಕಮ್ ॥೯೩॥

ರಾಮೋ ವಸಿಷ್ಠಸ್ಯ ಗುರೋಃ ಪದಾಂಬುಜಂ
ನತ್ವಾ ಯಥಾ ದೇವಗುರೋಃ ಶತಕ್ರತುಃ ।
ದತ್ವಾ ಮಹಾರ್ಹಾಸನಮುತ್ತಮಂ ಗುರೋ-
ರುಪಾವಿವೇಶಾಥ ಗುರೋಃ ಸಮೀಪತಃ ॥೯೪॥

೯೩-೯೪. ದೇವನಾದ (ರಾಮನು) ಪುಷ್ಪಕ (ವಿಮಾನವನ್ನು) ಕುರಿತು ಹೀಗೆಂದನು: "ನೀನು ಇಲ್ಲಿಂದ ಹೊರಡು; ಇನ್ನು ಮುಂದೆ ಧನಪಾಲಕನಾದ ಕುಬೇರನನ್ನು ಸೇರಿ ಅವನನ್ನು ಸೇವಿಸುವವನಾಗು. ನಿನಗೆ ಅಪ್ಪಣೆಯನ್ನು ಕೊಟ್ಟಿರುವೆನು". ಅನಂತರ ರಾಮನು ಗುರುಗಳಾದ ವಸಿಷ್ಠರ ಪಾದಾರವಿಂದಗಳನ್ನು ನಮಸ್ಕರಿಸಿ– ದೇವೇಂದ್ರನು ಬೃಹಸ್ಪತಿಯನ್ನು ಗೌರವಿಸುವಂತೆ – ಆ ಗುರುವಿಗೆ ಬಹಳ ಬೆಲೆಬಾಳುವ ಉತ್ತಮ ಆಸನವನ್ನು ನೀಡಿ ಅನಂತರ ತಾನೂ ಗುರುವಿನ ಹತ್ತಿರದಲ್ಲಿಯೇ ಕುಳಿತನು.

ಇತಿ ಶ್ರೀಮದಧ್ಯಾತ್ಮರಾಮಾಯಣೇ ಯುದ್ಧಕಾಂಡೇ ಚತುರ್ದಶಃ ಸರ್ಗಃ

———

Geeta is that Pravritti Dharma through Nivritti Dharma and Nivritti Dharma directly are the means for attaining Liberation.

### Bhakti Enunciated in the Geeta

We should keep this important aspect in our mind that these Dharmas (Pravritti and Nivritti) are related to the Ultimate Truth or the Self called Vasudeva. If Pravritti Dharma is observed as a sublime adoration of Ishwara or God, it yields the Samsiddhi (super achievement) of Jnana Nishtha Yogyata (the proper capacity for attaining Jnana Nishtha or establishment in the Self-knowledge or Pure Consciousness) - (18-45) ; and this observance is itself Bhakti Yoga (18-56). Hence what we call Karma Yoga from a Karma–dominated point of view is the same as Bhakti Yoga, which is called from the Ishwara–dominated point of view. Karma or performance of duties or actions is the external discipline required for raising it to the grade of Dhyana Yoga, while Sarva Karma Sanyasa or renunciation of all Karmas is the internal discipline (6-3). Because it is said that one who worships or is devoted to Vasudeva is the best among all devotees who worship the other deities (6-47) we will have to conclude that Sri Shankaracharya has opined that Karma Yoga, Dhyana Yoga and Bhakti Yoga are higher and more progressive disciplines in that order.

Devotion is of two kinds, namely, the devotion to other deities and devotion to Vasudeva, who is the Self of all. Persons who worship the other deities are also Satvikas (people with pious qualities or virtues) – (17–4) : they will get the Sayujya (becoming one with the deity) - (9–25) But one who contemplates on the Self or Vasudeva as everything is a Mahatma or great man (7-19) : because Vasudeva is the Self of all other deities also, the devotees of other deities are also worshipping Vasudeva only : even so, as they do not know this truth, they will only achieve a non–eternal fruit (9–23, 24 7–23). The devotion to God is not relished or liked by sinners (7-15) ; Aartha (distressed), Jignaasu (seeker of knowledge), Arthaarthi (seeker of prosperity) and Jnani (the enlightened) — these four types of virtuous men worship God (7-16). To the devotees who worship God

without any desire for wealth or possessions but for the sake of His (God's) love alone, He (Vasudeva) gives Buddhi Yoga (Yoga of right knowledge) and being ever present in their hearts He dispels the darkness of their Ignorance with the light of His knowledge (10-10, 11). The Bhagavat Tattva or the Ultimate Reality has two aspects — Sagunaroopa with the adjuncts (of names and forms) and endued with omniscience, omnipotence and Nirvishesharoopa (the Absolute Reality) without any adjuncts (12–1). Between these two it is easier to contemplate upon the Sagunaroopa: God alone uplifts the devotees of Sagunaroopa (12-2: 12-7). Hence, one should direct all his mind and intellect to the Saguna aspect of God and be His devotee performing the duties enjoined by Him only (11-55). This is the best among all disciplines recommended in the Geeta for attaining Liberation (9-84: 11-55; 18-65. But because even this contemplation upon Saguna Brahman has to be practised on the basis of the Ignorance which projects the difference between the Self and Ishwara or the Lord (12–13) direct emancipation or Liberation is attained only from the knowledge of Brahman devoid of all adjuncts (13–12: 13-14) 15, 17, 18).

## Jnana Enunciated in the Geeta

What is the essential nature (Swaroopa) of Jnana, the means for emancipation, which is obtained through devotion to God ? Because it is stated here in the Geeta by Bhagavan Sri Krishna that the knowledge of Kshetra and Kshetrajna alone is the real Jnana (13–2) and that Kshetra means the body and Kshetrajna is one who objectifies this (13–1) there is a possibility of doubting that it refers to the Sankhyan theory of discrimination between Prakriti and Purusha or the Vaisheshikas' theory that it refers to the knowledge of Jivatma who is different from Ishwara and who is of the nature of a knower. But the quotation, "Kshetrajna in all the Kshetras is the Lord (Bhagavan) alone" (13–2), in the Geeta is contrary to both these theories and besides in the Geeta no scope is there for the theories of many Atmans or Tatastheshwara (the Lord or the

ordainer who is quite different from the ordained i. e. the world as well as the souls). This has been concluded by Sri Shankaracharya and he has further argued it out that in the Geeta Shastra the Jnana or knowledge of the non-dual Self or Atman alone has been enunciated.

We will give here for the benefit of Jignasus (aspirants for Self-knowledge) a compilation of the main reasons mentioned by the Acharya (Shankara) to substantiate the statement that the non-dual Atman or the Self alone has been propounded in the Geeta

1. After saying that the 24 elements which the Sankhyas refer to are all Kshetra (i e. non-selves) -(13-5), the statements like Paramatman or Brahman who is the Kshetrajna in all the Kshetras (13-2) is indivisible although He seems to be divided in all the creatures (13–16), He is the Sakshi (Witness) or Upadrishta (the onlooker) - (9-18: 13–22) go totally against the Sankhyas, who hold the theories of Nirishwara (non–acceptance of the existence of Ishwara) and the existence of many Purushas.

2. The statement that Ichha (desire) and Chetana (sentience) etc. are all Kshetra only (13-6) is contrary to Vaisheshikas' theory or teaching that these are the qualities or characteristics of Atman.

3. It is quite clear that the statement that 'the Self or Atman of all creatures is Myself [Bhagavan]' [13–27] goes against their theory of Tatastheshwara.

Even before Shankaracharya, although some people were saying that Advaita is the purport of the Geeta, they were propagating that by blending Jnana and Karma or merely by Dhyana [meditation] the Jiva attains the identity with Ishwara after death [Geeta Bhashya 13-2]. The Jnana that is referred to by these people as well as the other Bhashyakaras [commentatory like Ramanuja, Madhva etc.] after Shankara is not the Jnana mentioned in the Geeta The following are the reasons based

on experience to prove that the Jnana which is approved by Shankaracharya is the same that is propounded in the Geeta:

1. Non-entity is not born, an entity is not destroyed—After propounding this truth of Satkaryavada, Bhagavan has clarified that because the body is not eternal it is a non-entity and that because Atman or the Self is indestructible He an entity (2-16 to 18). One who knows that because He (Atman) is devoid of any deformations or changes Atman has no destruction will not perform any Karma (2-21); a Jnani understands that the Karma that is seen in his Swaroopa (essential Being) is Akarma or no Karma ; in fact, he does not perform any Karma at all. One who knows that Prakriti alone performs the Karmas and not Atman has rightly understood (4-18, 5-8 5-13: 13-29)—such statements denote that Atman is not a doer of Karmas.

2. Jnani is the Self alone of Bhagavan (7-18): A Jnani who has the right knowledge (of the Ulitmate Reality) realises the existence of all the creatures in Bhagavan who is his Atman or the Self in all the creatures (6-29, 30): a Jnani after knowing Brahman gets himself merged in Brahman (18-55)—all such statements declare that the knowledge that Brahman and Atman are one and the same is the real Jnana or knowledge. From all such reasons and arguments Shankaracharya has opined that Advaita Jnana or knowledge of the non-dual Self as propounded by him alone is enunciated in the Geeta.

### Ajnana (Ignorance) and Maya, Which are Destroyed by Jnana

Ajnana (Ignorance), Maya — these two words are used in the Geeta at several places. What significant meanings are given to these words by Shankaracharya is worth determining. Although the Acharya has written that Maya is Ishwara's Shakti (power) — (13-5) just as the other commentators, what he speaks of as Maya is not an entity in the ultimate analysis. In fact, it is Prakriti (primordial subtlest matter) composed of

# ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರುಶಾಖೆ,

**ನಂ. 68, ೨ನೆಯ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-560028**

( ಸಂಸ್ಥಾಪಕರು : ಪ. ಪ. ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು )

## 1984ನೆಯ ಆಗಸ್ಟ್ ಮಾಹೆಯಲ್ಲಿ ನಡೆಯುವ

## ವಿಶೇಷ ಉಪನ್ಯಾಸಗಳು ; ಸಂಜೆ 5 ರಿಂದ 6 ರ ವರೆಗೆ

4-8-84ನೆಯ ಶನಿವಾರ

ಶ್ರೀ ಸಿ. ವಿಶ್ವೇಶ್ವರಯ್ಯನವರು, ಲಲಿತವಿದ್ಯಾಮಂದಿರ. **'ಅಧ್ಯಾತ್ಮಸಾಧನಗಳು"**

5-8-84ನೆಯ ಭಾನುವಾರ

ಪ್ರೊ. ಸಿ. ಅನಂತಾಚಾರ್‌ರವರಿಂದ **"ಅದ್ವೈತವೂ ತರ್ಕವೂ"**

11-8-84ನೆಯ ಶನಿವಾರ

ಕುಮಾರಿ ಹೆಚ್. ಪಿ. ಪದ್ಮಿನಿ M.Sc., ನ್ಯಾಷನಲ್ ಕಾಲೇಜ್

**"ಶ್ರೀರಾಮಕೃಷ್ಣರ ಅದ್ವೈತೋಪದೇಶ"**

12-8-84ನೆಯ ಭಾನುವಾರ

ಪ್ರೊ. ಎನ್. ಸಿ. ಶಂಕರನಾರಾಯಣರಾವ್ M.A., Phd.,
(ಮನಶ್ಶಾಸ್ತ್ರದ ಪ್ರಾಧ್ಯಾಪಕರು)

**"ಮನಶ್ಶಾಸ್ತ್ರದಲ್ಲಿ ಮನಸ್ಸು"**

18-8-84ನೆಯ ಶನಿವಾರ

ವೇದವಿದ್ಯಾಭೂಷಣ ವೇ॥ಬ್ರ॥ಶ್ರೀ॥ ಕೆ.ಜಿ. ಸುಬ್ರಾಯಶರ್ಮರಿಂದ

**"ಮೂಲಾವಿದ್ಯಾವಾದದಲ್ಲಿ ದೋಷಗಳು"**

19-8-84ನೆಯ ಭಾನುವಾರ

ಪ್ರೊ. ಬಿ. ಭೀಮಸೇನರಾವ್ M.Sc., **"ಭಗವಾನ್ ಶ್ರೀಕೃಷ್ಣ"**

25-8-84ನೆಯ ಶನಿವಾರ

ಪ್ರೊ. ಕೆ.ಟಿ. ಪಾಂಡುರಂಗಿ, M.A.; ಬೆಂಗಳೂರು ವಿಶ್ವವಿದ್ಯಾನಿಲಯ.

**"ಸಂಸ್ಕೃತದಲ್ಲಿ ಸ್ತೋತ್ರಸಾಹಿತ್ಯ"**

26-8-84ನೆಯ ಭಾನುವಾರ

ವಿದ್ವಾನ್ ಎಸ್.ಎ. ರಾಮಚಂದ್ರಭಟ್ಟರವರಿಂದ **"ಭಾಸನ ನಾಟಕಗಳು"**

**ತಮಗೆಲ್ಲರಿಗೂ ಆದರದ ಸುಸ್ವಾಗತ.**

ಬೆಂಗಳೂರು-560028
ತಾ॥ 1-8-1984.

**ಕೆ. ಜಿ. ಸುಬ್ರಾಯಶರ್ಮ,**
ಕಾರ್ಯದರ್ಶಿ.

**ADHYATMA *Prakasha***

Regd. No.
KRNI-5

Registered with the Registrar of News-papers for India under No. R. N. 13244/57

## ಕೇಳಿರಿ

ಅನ್ನವಿಲ್ಲದೆ ಸಾಯುವವರಿಗಿಂತಲೂ ಅದನ್ನು ಹೆಚ್ಚಾಗಿ ತಿಂದು ಸಾಯುವವರ ಸಂಖ್ಯೆಯೇ ಅಧಿಕವೆಂದು ವಿಶ್ವದ ತಜ್ಞರ ಅಭಿಪ್ರಾಯವೊಂದಿದೆ. ಆದರೆ ವೈಶ್ವಾನರವಿದ್ಯೋಪಾಸಕನ ಭೋಜನವು ಮಾತ್ರ ಮಾನವಕೋಟಿಗೇ ಅಲ್ಲದೆ ಸಮಸ್ತಪ್ರಾಣಿಗಳಿಗೂ ತೃಪ್ತಿಯನ್ನು ನೀಡುವದು. ಏಕೆಂದರೆ ಎಲ್ಲಾ ಪ್ರಾಣಿಗಳ ಜಠರಾಗ್ನಿರೂಪದಲ್ಲಿರುವ ಭಗವಂತನೇ ತನ್ನ ಆತ್ಮನೆಂದು ಈ ಉಪಾಸಕನು ಕಂಡುಕೊಂಡಿರುವನು. ಇಂಥ ಮಹಾವಿದ್ಯೆಯು ಮಾನವನ ಕೈವಶವಾದಾಗಲೇ ಹಸಿವು-ಸಾವು-ಅತೃಪ್ತಿಗಳು ಹೇಳಹೆಸರಿಲ್ಲವಾಗುವವು-ಎಂದು ಉಪನಿಷತ್ತು ಸಾರುತ್ತಿದೆ.

To.

Sri




111

M 414 Sri J. Sreenivasa
Murthy, No. 18, II Cross
Kodanda Rampuram
P.O. BANGALORE-3

Edited Printed & Published by H. S. Lakshminarasimha Murthy as Secretary for The Adhyatma Prakasha Karyalaya, At The Adhyatma Prakasha Press, Holenarsipur - 573211

6—8—1984